# ಶೂದ್ರ

ಬೆಲೆ : 1 ರೂ

ಬೀದಿ [illegible]:
ನನ್ನ ಕಾಲದ ಗಂಡ್ಹೆಂಗಸು
ಬಿ. ವಿ. ಕಾರಂತರಿಗೊಂದು ಪ್ರೇಮಪತ್ರ
'ಮಾತು ಮೌನದ ಮೊಗ್ಗೆಯನೊಡೆದು' ಬಂದ ಕವಿ

ಕನ್ನಡಕ್ಕೆ ತನ್ನದೇ ಆದ ರಂಗಭೂಮಿ :—ಕಿ. ರಂ. ನಾಗರಾಜ

ಬಂಗಾರಪ್ಪನವರಿಗೆ ಒಂದು ಪತ್ರ : ಎಸ್. ವೆಂಕಟರಾಂ





ಈ ಸಂಚಿಕೆಯಲ್ಲಿ

ವೆಂಕಟಲಕ್ಷ್ಮಿ ಬಿ. ಎಸ್
ಕೆ. ಎನ್. ಶಶಿಪ್ರಭ
ಕುಂ. ವೀರಭದ್ರಪ್ಪ
ವಿ. ಆರ್. ಪ್ರತಿಭಾ
ಪುರುಷೋತ್ತಮ ಬಿಳಿಮಲೆ
ಪಂಡಿತ ತಾರಾನಾಥ್
ಬಾಪುಹೆದ್ದೂರ ಶೆಟ್ಟಿ
ಶಂಕರ ಲಾಳಾಪುರ

ಶೂದ್ರ

ಸಂಪುಟ : 5 ಆಗಸ್ಟ್ 1980 ಸಂಚಿಕೆ : 10

ಸಹಾಯಕ ಸಂಪಾದಕರು : ಪದ್ಮರಾಜ ದಂಡಾವತಿ
ಗೋ. ಶ್ರೀನಿವಾಸ್
ನಿರ್ಮಲ. ಎಸ್. ರೆಡ್ಡಿ
ಪುರುಷೋತ್ತಮ. ಎ

● ಶೂದ್ರಕ್ಕೆ ಚಂದಾ ಕಳಿಸಿಕೊಡಿ ● ಒಂದಷ್ಟು ಸಂಚಿಕೆಗಳನ್ನು ತರಿಸಿಕೊಂಡು ನಿಮ್ಮ ಗೆಳೆಯರಿಗೆ ಹಂಚಿ ● ನಿಮ್ಮ ಸುತ್ತಮುತ್ತ ಏನೇನೋ ನಡೆಯುತ್ತದೆ ಆದನ್ನು ಶೂದ್ರದಲ್ಲಿ ಏಕೆ ದಾಖಲು ಗೊಳಿಸಬಾರದು ? ● ಪುಟ್ಟ ಕತೆಗಳನ್ನು ಕಳಿಸಿಕೊಡಿ ಅನುವಾದವಾದರೂ ಚಿಂತೆಯಿಲ್ಲ.

ಮುಖ ಚಿತ್ರ : ಅಸ್ಸಾಂ ಚಳವಳಿಯ ಮೂಲಕ ಶುರುವಾದ ತ್ರಿಪುರ ಹಿಂಸಾತ್ಮಕ ಚಳವಳಿಯನ್ನು ಕಂಡು ದುಃಖಿಸುತ್ತಿರುವ ವೃದ್ಧೆ

ಶೂದ್ರ ಶ್ರೀನಿವಾಸ್,
ಸದ್ದುಗುಂಟೇಪಾಳ್ಯ,
ಡಿ. ಆರ್. ಕಾಲೇಜ್ ಪೋಸ್ಟ್,
ಬೆಂಗಳೂರು–560 029.

**ವಾರ್ಷಿಕ ಚಂದಾ 12 ರೂ.**

ಒಳಗಿನ ಪುಟಗಳಲ್ಲಿ ಕೆ. ಎಂ. ಮುನಿಕೃಷ್ಣಪ್ಪನವರ 'ನೋವು' ಕವನ ಹಾಗೂ 'ಆಹುತಿ' ಕಾದಂಬರಿಯ ಬಗ್ಗೆ ಒಂದು ಟಿಪ್ಪಣಿ 'ಬಂಡಾಯ ಮತ್ತು ಒಡಲಾಳ ಕಿಚ್ಚು'ನ ವಿಮರ್ಶೆ.

**ಸೆಪ್ಟೆಂಬರ್ ಸಂಚಿಕೆಯಲ್ಲಿ ಪ್ರೇಮಚಂದ್ – ನಿದ್ದೆಗಣ್ಣಿನಲ್ಲಿ ಬಸವರಾಜ ಕಟ್ಟೀಮನಿ ಮತ್ತು ಅಮೃತ್‌ರಾಯ್ (ಪ್ರೇಮಚಂದರ ಮಗ) ರವರ ಸಂದರ್ಶನ ಮತ್ತು 'ಕಫನ್'' ನಾಟಕದ ವಿಮರ್ಶೆ**

# ಪ್ರೀತಿ-ಪ್ರೇಮ-ದ್ವೇಷದ ನಡುವೆ 'ಆಹುತಿ'

—ಶೂದ್ರ ಶ್ರೀನಿವಾಸ್

ಚರಿತ್ರೆಯಲ್ಲಿ ಮತೀಯ ಮತ್ತು ಜಾತಿಯ ಭಾವನೆಗಳನ್ನು ಬೆಳಸುತ್ತಿರುವ ಶಕ್ತಿಗಳು ಹೆಚ್ಚು ಕ್ರಿಯಾಶೀಲವಾಗಿರುವುದನ್ನ ನೋಡುತ್ತ ಬಂದಿದ್ದೇವೆ. ಇದರಿಂದಾಗುವ ಅನಾಹುತಗಳಿಗೆ ಬಲಿಯಾಗುವವರು ಯಾವಾಗಲೂ ನಿರಪಾರಾಧಿಗಳು. ನಮ್ಮ ಸ್ವಾತಂತ್ರ್ಯ ಹೋರಾಟ ಈ ಶತಮಾನದಲ್ಲಿ ನಡೆದ ಮಹತ್ತರ ರಾಜಕೀಯ ಘಟನೆಯೆಂದರೂ ; ಅದರ ಬೆನ್ನಿನಲ್ಲಿಯೇ ನಡೆದ ಮತೀಯ ಗಲಭೆಗಳನ್ನು ನಾವ್ಯಾರು ಮರೆಯುವಂತಿಲ್ಲ. ಸ್ವಾತಂತ್ರ್ಯದ ದಿನಗಳು ನಮಗೆ ಕನಸಿನ ದಿನಗಳಾಗುತ್ತಿವೆ. ಆದರೆ ಅದರ ಬೆನ್ನತ್ತಿ ಬಂದ ಮತೀಯ ಭಾವನೆಗಳು ಹೆಚ್ಚು ಹೆಚ್ಚು ಸೂಕ್ಷ್ಮವಾಗಿ ಮನುಷ್ಯನ ಸಂಬಂಧಗಳ ನಡುವೆ ಬೇರು ಬಿಡುತ್ತ ಹೊಗುತ್ತಿದೆ. ದಿನನಿತ್ಯ ಇದನ್ನು ಸಾಬೀತು ಪಡಿಸುವ ನರಮೇಧವು ಸ್ವಾಭಾವಿಕವೆನ್ನುವ ಮಟ್ಟಿಗೆ ತನ್ನ ಬಾಹುಗಳನ್ನು ಚಾಚಿಕೊಂಡಿದೆ. ಇಂಥ ಮತೀಯ ಅಥವಾ ಜಾತೀಯ ಭಾವನೆಗಳನ್ನು ಕರಾರುವಕ್ಕಾಗಿ ನಡೆಸಿಕೊಂಡು ಹೋಗುವ ಶಕ್ತಿಗಳು ಹೆಚ್ಚು ಚಲನ ಶೀಲತೆಯನ್ನು ಪಡೆಯುತ್ತಿವೆ. ಇದಕ್ಕೆ ಆಳುವ ಶಕ್ತಿಗಳು ಪೂರಕವಾಗಿರುವುದರಿಂದಲೇ ಸಮಸ್ಯೆ ಸಂಕೀರ್ಣ ಸ್ವರೂಪವನ್ನು ಪಡೆಯುತ್ತಿರುವುದು.

ಅದೊಂದು ದಿನ ಸಂಜೆ ಹೋಟೆಲ್‌ನಲ್ಲಿ ಕಾಫೀ ಕುಡಿದು ಹೊರಗೆ ಬಂದಾಗ ಗೆಳೆಯ ಗಿರೀಶ್ ಕಾಸರವಳ್ಳಿಯವರು ಈ ಕಾದಂಬರಿಯನ್ನು (ಆಹುತಿ) ಓದಿ ಅಭಿಪ್ರಾಯ ತಿಳಿಸಿ ಅಂದರು. ಯಾರಾದರೂ ಓದಿ ಅಭಿಪ್ರಾಯ ತಿಳಿಸಿ ಅಂದಾಗ ; ನಾವು ವಸ್ತುವಿನತ್ತ ಹೆಚ್ಚು ಜವಾಬ್ದಾರರಾಗಬಹುದೆಂದು ಕಾಣುತ್ತೆ. ಈ ಕಾರಣದಿಂದ 'ಆಹುತಿ'ಯನ್ನು ಓದಲು ತೊಡಗಿದೆ. ಸುಮಾರು ಐವತ್ತು ಪುಟಗಳ ಗಡಿಯನ್ನು ದಾಟಿರಬೇಕು—ಬೇಸರದಿಂದ ಟೇಬಲ್ಲಿನ ಮೇಲೆ ಎಸೆದೆ. ಮಾರನೆಯ ದಿನ ಕಾಸರವಳ್ಳಿಯವರು ಪ್ರಜಾವಾಣಿಯಲ್ಲಿ ಸಿಕ್ಕಿದಾಗ ಒಂದು ರೀತಿಯ ಅಸಮಾಧಾನದ ಮಾತು

ಗಳನ್ನಾಡಿದೆ ಅನ್ನಿಸುತ್ತೆ. ಆದರೆ ಅಂದು ರಾತ್ರಿ ಓದಿ ಮುಗಿಸುವ ಆಸೆಯಿಂದ ಪುಸ್ತಕ ತೆಗೆದುಕೊಂಡೆ. ಈ ಆಸೆಗೆ ತೀವ್ರತೆ ಇರಲಿಲ್ಲ.

ಒಂದಷ್ಟು ಪುಟಗಳನ್ನು ಮುಗಿಸಿದೆ. ಕೆಲವು ವರ್ಷಗಳ ನನ್ನ ಅನುಭವಗಳಿಗೆ ಕಚಗುಳಿಯಿಡುತ್ತಿರ ಅನ್ನಿಸಿತು. ಓದುತ್ತ ಹೋದಂತೆಲ್ಲ ಕಾದಂಬರಿಯ ನಡುವೆ ಇದ್ದೆ. ವಾಪಸ್ಸು ಬರುವ ಯೋಚನೆಯನ್ನು ಮರೆತಿದ್ದೆ. ಮತೀಯ ಸಂಬಂಧಗಳ ನಡುವೆ ಮನುಷ್ಯನ ನಡುವಳಿಕೆಯು ಬಿಗಡಾಯಿಸುವ ಘಟ್ಟದಲ್ಲಿ ನಡೆಸುವ ಕ್ರಿಯೆ ಹೆಚ್ಚು ಸೂಕ್ಷ್ಮವಾಗುತ್ತ ಹೋಗುತ್ತಿತ್ತು. ನಿನ್ನೆಯಿಂದ ಇಂದಿನವರೆಗೆ ನಮ್ಮ ಕಾಲೇಜುಗಳ ರಾಜಕೀಯ ಚಟುವಟಿಕೆಗಳು ಕ್ರೂರವಾಗುತ್ತಿರುವ ಹಿನ್ನೆಲೆಯಲ್ಲಿ ರಚಿಸಿದ ಉತ್ತಮ ಕಾದಂಬರಿ ಅನ್ನಿಸ ತೊಡಗಿತು.

ಕಾದಂಬರಿಯನ್ನು ಓದಿ ಮುಗಿಸಿದ ಮೇಲೆ ಒಂದು ರೀತಿಯ ನೋವಿನಿಂದ ನರಳಿದೆ. ಅದೇ ನೋವಿನಲ್ಲಿ ಪ್ರೀತಿಯಿಂದ ವೇಣುಗೋಪಾಲ ಕಾಸರಗೋಡು ಅವರಿಗೆ ಪತ್ರ ಬರೆದೆ. ಅವರಿಗೆ ನನ್ನ ಪತ್ರ 'ಆಕಸ್ಮಿಕ'ವಾಗಿತ್ತಂತೆ ಆಹುತಿ ಪ್ರಕಟವಾದ ಸಮಯದಲ್ಲಿ ಅದು ಯಾರ ಗಮನಕ್ಕೆ ಬೀಳಲಿಲ್ಲವಂತೆ.

ಸಿದ್ಧಾಂತದ ಬಲದ ಮೇಲೆ ನಿಲ್ಲದ ಯಾವುದೇ ಗುಂಪಾಗಲಿ ಚಿಲ್ಲರೆ ರಾಜಕೀಯದ ಒತ್ತಡಕ್ಕೆ ಬಲಿಯಾಗುವುದು ಸ್ವಾಭಾವಿಕ. ಸ್ವಾತಂತ್ರ್ಯನಂತರ ಇಂಥ ರಾಜಕೀಯ ಸ್ವರೂಪವನ್ನು ನಮ್ಮ ಸಮಾಜದ ಎಲ್ಲ ಹಂತಗಳಲ್ಲೂ ಕಾಣಬಹುದು. ಆದ್ದರಿಂದ ಈ ಕಾದಂಬರಿಯಲ್ಲಿ ಬರುವ ಕಾಲೇಜು ಹೊರತಲ್ಲ. ಇಲ್ಲಿಯ ಹುಡುಗರಂತೆ—ಅಧ್ಯಾಪಕರು ತಮ್ಮ ಸಣ್ಣತನಗಳಿಗೆ ಹೆಸರುವಾಸಿಯಾದವರು. ಪ್ರಿನ್ಸಿಪಾಲರು ನರಳು ವುದನ್ನು ಕಾಣುವಲ್ಲಿಯ ಕಾತುರತೆಯನ್ನು ಕಾದಂಬರಿಕಾರರು ಗಂಭೀರವಾಗಿ ಚಿತ್ರಿಸಿದ್ದಾರೆ.

ಆಹುತಿ ಕಾದಂಬರಿ ಕಾಲೇಜಿನ ವಾರ್ಷಿಕೋತ್ಸವದ ಹಂತದಿಂದ ಪ್ರಾರಂಭವಾಗುತ್ತದೆ. ಇದಕ್ಕಿಂತ ಮೊದಲು ಚರಿತ್ರೆಯ ಪ್ರಾಧ್ಯಾಪಕ ಕರೀಂಖಾನ್ ನಡೆದುಹೋದ ದುರಂತವನ್ನು ಹೇಳುವುದರ ಮೂಲಕ ಬೆಳೆಯುತ್ತದೆ. ತನ್ನ ವ್ಯಕ್ತಿತ್ವದ ಮೂಲಕ ಹೆಚ್ಚು ಆಕರ್ಷಣೆಗೆ ಒಳಗಾಗುವ ಕರೀಂಖಾನ್ ಹೇಳುವ ಕತೆಗೆ ತೂಕ ಬರುತ್ತ ಹೋಗುತ್ತದೆ. "ಮನುಷ್ಯನ ದುರ್ಬಲಗಳಿಗೆಗಳಲ್ಲಿ ಬಹುಶಃ ಇಂಥದೆಲ್ಲ ನಡಿತದೆ ಅಂತ ತೋರುತ್ತದೆ" ಮುಂದೆ "ತಪ್ಪುಗಳನ್ನೆಲ್ಲ ದೌರ್ಬಲ್ಯ ಅಂತ್ಹೇಳಿ ಕ್ಷಮಿಸೋದಿಕ್ಕೆ ಆಗೋದಿಲ್ಲ. ಹಾಗೆ ಮಾಡಿದರೆ ಅದು ನಮ್ಮ ಹೇಡಿತನವನ್ನು ಸೂಚಿಸತ್ತದೆ ಅಷ್ಟೆ. ಮನುಷ್ಯ

ಮುಂದುವರಿದಿದ್ದಾನೆ, ಅಂತ ನಾವು ದೊಡ್ಡದಾಗಿ ಹೇಳ್ತೀವೆ. ಆದರೆ ಅವನಲ್ಲಿರೋ ಮೃಗ? ಅದು ಮುಂದುವರೀತಾನೆ ಇದೆ. ಮ್ಯಾನ್ ಈಸ್ ಗೋಯಿಂಗ್ ಬ್ಯಾಕ್, ಡೇ ಬೈಡೇ, ಇದು ನನ್ನ ಅನುಭವದಿಂದ ಕಲಿತಿರೋ ಆಂತ್ರಪಾಲಜಿ" ಎನ್ನುವ ಕರೀಂ ಖಾನ್ ಚರಿತ್ರೆಯ ಮೇಸ್ಟ್ರಾಗಿ ಕಾದಂಬರಿಯಲ್ಲಿ ಮಾತಾಡುತ್ತ ಹೋಗುತ್ತಾನೆ. ಕರೀಂ ಖಾನ್ ಕಾಣಿಸಿಕೊಳ್ಳುವುದು ಪ್ರಾರಂಭದಲ್ಲಿ ಮತ್ತು ಕೊನೆಯಲ್ಲಿ. ಆದರೆ ಅವನು ಹೇಳುವ ಕತೆಯಿಂದ ಕಾದಂಬರಿ ಗಾಢವಾಗುವುದರ ಜೊತೆಗೆ ಕರೀಂಖಾನ್ ಕೂಡ ಮನುಷ್ಯ ಸಂಬಂಧಗಳ ನಡುವೆ ಗಾಢವಾಗುವನು. ಮತೀಯ ಭಾವನೆಗಳ ಸೂಕ್ಷ್ಮ ಎಳೆಗಳನ್ನು ಗುಂಪುರಾಜಕೀಯಕ್ಕೆ ಬಳಸಿಕೊಂಡು ತಮ್ಮ ಬೇಳೆ ಬೇಯಿಸಿಕೊಳ್ಳುವ ವಾಸುದೇವ ಪೈ ಯಾಗಲಿ, ಮಂತ್ರಿ ಹಸನ್‌ಕುಟ್ಟಿಯಾಗಲಿ, ಈ ಸಮಾಜಕ್ಕೆ ಹೊಸಬರಲ್ಲ. ಮಮ್ಮಿಂ ಣ್ಣಿಯಂಥ ಕಳ್ಳಸಾಗಣೆಕೆದಾರರು ತೆರೆಮರೆಯಲ್ಲಿ ನಿಂತು ಎಲ್ಲ ರೀತಿಯ ಕ್ಷುಲ್ಲಕ ರಾಜಕೀಯವನ್ನು ನಡೆಸುತ್ತ ಹೋಗುತ್ತಾರೆ. ಈ ರೀತಿ ನಡೆಸಲು ಚುನಾವಣೆಯ ಬಿಸಿ ಯಂತೆ ಮತೀಯ ಭಾವನೆಗಳನ್ನು ವಿಕೋಪಕ್ಕೆ ಕರೆದೊಯ್ಯುವಲ್ಲಿ ಹೆಚ್ಚು ಹೆಚ್ಚು ಜಾಣ ತನವನ್ನು ಪ್ರದರ್ಶಿಸುತ್ತಾರೆ. ಆಗ ತಾವು ಮೇಯಿಸಿದ ಜಬ್ಬಾರ್‌ನಂಥ ಹುಲಿಗಳನ್ನ ಸಾಧು ಪ್ರಾಣಿಗಳೆಂದು ಸಾಬೀತು ಮಾಡಲು ಹಿಂದು ಮುಂದು ನೋಡುವುದಿಲ್ಲ. ಈ ದೃಷ್ಟಿಯಿಂದ ಜಬ್ಬಾರ್ ಮೈ ಬೆಳೆಸಿಕೊಳ್ಳುವುದರ ಮೂಲಕ ಜ್ವಾಲಾಳನ್ನು ಚುಂಬಿಸು ವುದು 'ಪ್ರಿಸ್ಟೈಜು' ಎಂದು ಭಾವಿಸುವ ವಾತಾವರಣದಲ್ಲಿ ನಾವು ಬದುಕಿದ್ದೇವೆ. ಹೆಣ್ಣು-ಗಂಡಿನ ಸಂಬಂಧ ಯಾವಾಗಲೂ ಸಂಕೀರ್ಣವಾಗಿರುವುದರಿಂದ ಮತ್ತೊಬ್ಬ ಗಂಡು ಅಕ್ರಮವಾಗಿ ಪ್ರವೇಶಿಸಿದಾಗ ಪರಿಸ್ಥಿತಿ ಬಿಗಡಾಯಿಸುವುದು ಸ್ವಾಭಾವಿಕ. ಅದರಲ್ಲೂ ಜಬ್ಬಾರ್‌ನ ಅತಿಕ್ರಮಣಕ್ಕೆ ಒತ್ತು ಬೀಳುವುದು ಅವನು ಮುಸ್ಲಿಂ ಎಂಬ ಕಾರಣಕ್ಕಾಗಿ ಮತ್ತು ಇದಕ್ಕೆ ಸಂಬಂಧಪಟ್ಟ ಹಾಗೆ ಎರಡು ಕಡೆಯವರನ್ನ ಪುಸಲಾಯಿಸಿ ಲಾಭ ಪಡೆಯುವ ವಾಸುದೇವ ಪೈ ಮತ್ತು ಮಂತ್ರಿ ಹಸನ್‌ಕುಟ್ಟಿ ಇದ್ದೇ ಇರ್ತಾರೆ. ಈ ಕಾದಂಬರಿಯಲ್ಲಿ ಪ್ರಿನ್ಸಿಪಾಲ್ ನಾಯರ್ ತನ್ನ ಪ್ರಿಸ್ಟೈಜ್‌ಗೋಸ್ಕರ ಏನೇನೋ ಮಾಡಲು ಹೋಗುತ್ತಾನೆ ಎಂದು ಕಾದಂಬರಿಕಾರರು ಹೇಳಲು ಹೊರಟರೂ ನಾಯರ್ ಕಾದಂಬರಿಯುದ್ದಕ್ಕೂ ಹೆಚ್ಚು ಪ್ರಾಮಾಣಿಕ ವ್ಯಕ್ತಿಯಾಗಿ ಕಾಣಿಸಿಕೊಳ್ಳುತ್ತಾನೆ, ಮತ್ತು ಜ್ವಾಲಾ, ಚಂದ್ರಹಾಸ್ ಮತ್ತು ಗೋಪಿಯ ರೀತಿಯಲ್ಲಿ ಹೆಚ್ಚು ಹೊಡೆತವನ್ನು ಅನುಭವಿಸುತ್ತಾನೆ ನಾಯರ್.

*

ಸೈದ್ಧಾಂತಿಕ ಸಂಬಂಧಗಳನ್ನು ಕುರಿತು ಮಾತಾಡುತ್ತ ಹೋಗುವ ಸಮಯದಲ್ಲಿ ಕೆಲವು ತಪ್ಪುಗಳನ್ನು ಮಾಡುವ ಹೊಣೆಗಾರರಾಗುತ್ತಾರೆ ಕಾದಂಬರಿಕಾರರು. ಉದಾಹರಣೆಗೆ ಜಬ್ಬಾರನನ್ನು ಪ್ರತಿಭಟಿಸಲು ಸಂಘಟಿತರಾಗುವಾಗ ಒಳ್ಳೆಯ ಥಿಯರಿ

ಟಿಸಿಯನ್ನನ ರೀತಿಯಲ್ಲಿ ಚರ್ಚಿಸುವ ಅಮೀನ್ 'ಮಾರ್ಕ್ಸಿಸ್ಟರು ಒಳ್ಳೆಯ ಕಾಸ್‌ಗೆ ಬೆಂಬಲ ಕೊಡ್ತಾರೆ ಅನ್ನುವುದು, ನಂತರ "ಮಾರ್ಕ್ಸಿಸ್ಟರ ಗುಂಪಿನಲ್ಲಿ ಥಾಂಡಿಗರಾದ ಹತ್ತು ಹದಿನೈದು ಮಂದಿ ವಿದ್ಯಾರ್ಥಿಗಳಿದ್ದಾರೆ" ಎನ್ನುವಲ್ಲಿಯು ಗೊಂದಲಗಳನ್ನು ಗುರ್ತಿಸಬಹುದು. ಇದಕ್ಕೆ ಮುಖ್ಯ ಕಾರಣ ಕಾದಂಬರಿಕಾರರು ಸೈದ್ಧಾಂತಿಕವಾಗಿ ಬೆಳೆದ ಹುಡುಗರು ರಾಜಕಾರಣದ ವಕ್ತಾರರಾದಾಗ ಆಗುವ ಆರೋಗ್ಯ ಪೂರ್ಣತೆಯನ್ನು ಅರಿತಂತಿಲ್ಲ ಅನ್ನಿಸುತ್ತೆ. ಆದ್ದರಿಂದಲೇ ಅಮೀನ್‌ನಂಥ ಬುದ್ಧಿವಂತ ಹುಡುಗನನ್ನು ನಾಪತ್ತೆ ಮಾಡುವುದರ ಮೂಲಕ ಚಂದ್ರಹಾಸನನ್ನ ಗೂಂಡಾಗಳು ಸಾಯಿಸಿರುತ್ತಾರೆ. ಗೋಪಿಯನ್ನ ಮಾನಸಿಕವಾಗಿ ಸಾಯಿಸಿರುತ್ತಾರೆ. ಮತ್ತು ಜ್ವಾಲಾಳನ್ನು ಒಂದು ದೊಡ್ಡ ಗುಂಪು ರೇಪ್‌ಮಾಡುವುದರ ಮೂಲಕ ಸಾಯಿಸಿರುತ್ತಾರೆ. ಇದಕ್ಕೆ ಸಂಬಂಧಿಸಿದಂತೆ ಕಾದಂಬರಿಕಾರರು ನಿರ್ಮಿಸಿಕೊಳ್ಳುವ ವಾತಾವರಣ ನಿಜವಾಗಿಯೂ ಭಯೋತ್ಪಾದಕವಾದದ್ದು. ಇಂಥ ಸಮಯದಲ್ಲಿ ಆಳುವ ವರ್ಗದ ಕೈಗೊಂಬೆಯಾಗುವ ಬಾಲಕೃಷ್ಣನಂಥ ಪೋಲೀಸ್ ಅಧಿಕಾರಿ ಮತ್ತು ಮಂತ್ರಿ ಹಸನ್‌ಕುಟ್ಟಿ, ತನ್ನ ಬೆಂಬಲದಿಂದ ಮಂತ್ರಿಮಂಡಳದ ಅಸ್ತಿತ್ವನಿಂತಿದೆಯೆಂಬ ಪೊಗರಿನಿಂದ ತುಂಬ ಕ್ರೂರರೀತಿಯಲ್ಲಿ ಮತೀಯ ರಾಜಕೀಯದ ಚುಕ್ಕಾಣಿ ಹಿಡಿಯಲು ತೊಡಗುವುದು ಅರ್ಥಪೂರ್ಣ ಅನಿಸುತ್ತೆ.

ಪ್ರಿನ್ಸಿಪಾಲ್‌ನಾಯರ್‌ರವರು ಜಬ್ಬಾರನನ್ನು ಸಸ್ಪೆಂಡ್ ಮಾಡಿದಾಗ (ಇದಕ್ಕಿಂತ ಮೊದಲು ಜಬ್ಬಾರನನ್ನೂ ಸಸ್ಪೆಂಡ್ ಮಾಡಿಸಲು ಅಮೀನ್ ಮತ್ತು ಚಂದ್ರಹಾಸ್‌ನ ಕಡೆಯವರು ಸ್ಟ್ರೈಕ್ ಮಾಡಿಸಲು ತೊಡಗುತ್ತಾರೆ. ಆ ಸಮಯದಲ್ಲಿ ಅವರು ನಡೆಸುವ ಸ್ಟ್ರಾಟಜಿಗಳು ಹೆಚ್ಚು ಆಕರ್ಷಣೀಯವಾಗಿ ಕಾಣುತ್ತದೆ) ಜಬ್ಬಾರನ ಕಡೆಯವರು ನಡೆಸುವ ವಿಧ್ವಂಸಕ ಕೃತ್ಯಗಳು ಭಯವನ್ನು ಹುಟ್ಟಿಸುವಂತದ್ದು. ಇದರ ನಂತರ ಮಂತ್ರಿ ಹಸನ್‌ಕುಟ್ಟಿ ತನ್ನ 'ಪ್ರಿಸ್ಟೈಜ್' ಉಳಿಸಿಕೊಳ್ಳಲು ಜಬ್ಬಾರನ ಸಸ್ಪೆಂಡನ್ನ ಕ್ಯಾನ್ಸಲ್ ಮಾಡಿಸಲು ನಾಯರನ್ನ ಭೇಟಿಯಾಗುವನು. ನಾನಾ ರೀತಿಯ ಆಮಿಷಗಳನ್ನು ತೋರಿಸುವನು. ನಾಯರ್‌ನ ಸುಟ್ಟು ಹೋದ ಕಾರಿಗಿಂತ ಉತ್ತಮ ಕಾರನ್ನು ಕೊಡಿಸುವೆ ಎನ್ನುವನು. ಆದರೆ ಅದಾವುದಕ್ಕೂ ನಾಯರ್ ಜಗ್ಗುವುದಿಲ್ಲ. ಇದರಿಂದ ನಾಯರನ್ನ ಸರ್ಕಾರ ಸಸ್ಪೆಂಡ್ ಮಾಡುತ್ತೆ. ಇಂದಿನ ರಾಜಕೀಯ ವ್ಯವಸ್ಥೆಯಲ್ಲಿ ಇದ್ಯಾವುದು ಆಕಸ್ಮಿಕವಲ್ಲ ಎಂಬುದನ್ನು ಕಾದಂಬರಿಕಾರರು ತುಂಬ ಮಾರ್ಮಿಕವಾಗಿ ತಂದಿದ್ದಾರೆ.

ಅಣ್ಣಪ್ಪ ಕಾಮತರ ಮಗಳು "ತಂದೆಯ ಇಳಿಗಾಲದಲ್ಲಿ ಅದೂ ಚಿನ್ನದ ಚಮಚವನ್ನು ಚೀಪುತ್ತ ಹುಟ್ಟಿದ 'ಜ್ವಾಲಾ' ಹೇಗೆ ಬೆಳೆದಳು ಅಂತ ಹೇಳಬೇಕಾಗಿಯೇ ಇಲ್ಲ

ಎಂದು ಕಾದಂಬರಿಕಾರರು ಹೇಳಿದರೂ 'ಜ್ವಾಲಾ' ಕಾದಂಬರಿಯಲ್ಲಿ ಕೆಟ್ಟವಳಾಗಿ ಕಾಣುವುದಿಲ್ಲ. ವಾರ್ಷಿಕೋತ್ಸವದ ಸಂದರ್ಭದಲ್ಲಿ ತಾನು ಸುಂದರ ಹುಡುಗಿ ಎಂದು ಮೈಪ್ರದರ್ಶಿಸಿದರೂ ; ಮಿಕ್ಕ ಸಮಯದಲ್ಲಿ ಅವಳು ಸಭ್ಯ (ಸಮಾಜ ಒಪ್ಪಿಕೊಂಡಿರುವ) ಹುಡುಗಿಯಾಗಿಯೇ ಕಾಣ್ತಾಳೆ. ಆ ಕಾರಣಕ್ಕಾಗಿಯೆ ಇರಬಹುದು ಚಂದ್ರಹಾಸ ಮತ್ತು ಜ್ವಾಲಾಳ ಸಂಬಂಧ ಹೆಚ್ಚು ಗೂಢವಾಗಿಯೇ ಇರುವುದು. 'ಆಹುತಿ' ರಾಜಕೀಯ ರೂಪರೇಷೆಯನ್ನ ಪಡೆಯುತ್ತ ಬೆಳೆಯುವುದು ಜಬ್ಬಾರ್, ಜ್ವಾಲಾಳನ್ನ ಕಿಸ್ ಮಾಡಿದ ನಂತರ. ಕೊನೆಗೆ ಮುಗಿಯುವುದು ಚಂದ್ರಹಾಸ ಮತ್ತು ಜ್ವಾಲಾಳ ಶವಗಳನ್ನು ಮೆರವಣಿಗೆಯಲ್ಲಿ ಕೊಂಡೊಯ್ಯುವಲ್ಲಿಗೆ. ಮೆರವಣಿಗೆ ಮಸೀದಿಯ ಸಮೀಪಕ್ಕೆ ಬಂದಾಗ ನಡೆಯುವ ಗಲಭೆ, ಲೂಟಿ ಮತ್ತು ಹಿಂಸಾಚಾರವನ್ನು ಕಾದಂಬರಿಕಾರರು ಪ್ರಾಮಾಣಿಕವಾಗಿ ಚಿತ್ರಿಸಿರುವುದರಿಂದಲೇ ಆ ಭಯೋತ್ಪಾದನೆ ಅಸಹಜ ಅನ್ನಿಸದೆ ಒಟ್ಟು ಬೆಳವಣಿಗೆಯ ಒಡಲಲ್ಲಿ ಸೇರಿಕೊಳ್ಳುತ್ತೆ.

'ಆಹುತಿ'ಯಲ್ಲಿ ನೂರಾರು ಮಂದಿ ನಿರಪರಾಧಿಗಳು ಆಹುತಿಯಾಗುತ್ತಾರೆ. ಇದನ್ನೇ ಕಾರಣಮಾಡಿಕೊಂಡು ತಮ್ಮ ಬಹುದಿನಗಳ ರಾಜಕೀಯ ಆಸೆಯನ್ನು ಪೂರೈಸಿಕೊಳ್ಳುವ ವಾಸುದೇವ ಪೈ ಎಂ.ಎಲ್.ಎ.ಆಗ್ತಾರೆ. "ವಿರೋಧಪಕ್ಷದ ಕೂಗನ್ನ ಅಡಗಿಸೋದಿಕ್ಕೆ ಗವರ್ನ್‌ಮೆಂಟ್ ಒಂದು ಎನ್‌ಕ್ವಾಯರಿ ಕಮಿಶನ್ ಅಂತ ಮಾಡಿತು. ವಿಚಾರಣೆಮಾಡೀತು. ಆದ್ರೆ ಅದರ ರಿಪೋರ್ಟ್ನ ಕಂಡೋರು ಇಲ್ಲ. ಕೇಳ್ದೋರು ಇಲ್ಲ." ವಾಸುದೇವ ಪೈ ಎರಡನೆಯ ಬಾರಿಗೂ ಎಂ.ಎಲ್.ಎ ಆಗ್ತಾರೆ. ಅದನ್ನ ಕೆದಕಲ್ಕೆ ವಾಸುದೇವ ಪೈ ಹೋಗುವುದಿಲ್ಲ. ಆದರೆ ಚಂದ್ರಹಾಸನ ಜೊತೆ ಪೆಟ್ಟು ತಿಂದು ಬದುಕಿದ ಗೋಪಿ ಹುಚ್ಚನಂತೆ ಓಡಾಡಿ ಕೊಂಡಿರುತ್ತಾನೆ ನಡೆದು ಹೋದದ್ದನ್ನ ನೆನಪಿಗೆ ತರಲು. 'ಆಹುತಿ' ನಮ್ಮ ಕಾಲೇಜುಗಳಲ್ಲಿಯ ವಿದ್ಯಾರ್ಥಿ ರಾಜಕೀಯವನ್ನು ಜೊತೆಗೆ ಮತೀಯ ರಾಜಕೀಯವನ್ನ ಸಮರ್ಪಕವಾಗಿ ಹಿಡಿದಿಡುವ ಅಪರೂಪದ ಕೃತಿ ಎನ್ನಬಹುದು.

o—o

Certsinly no modern thinker resembles Confucius less than Marx does. Confucius was the bearer of a conservative wisdom ; Marx, the creafor of a revolutionary doctirine. Confucius founded a wise, pious, and reascnable humanism ; Marx's humanism is heroic, irreligious, dramatic.

—MORAVIA

## ಪುಸ್ತಕ ವಿಮರ್ಶೆ

### 'ಶೋಷಿತ ಜಗತ್ತಿನ ಮತ್ತು ರಾಜಕೀಯ ದುರಂತಗಳ ಅಭಿವ್ಯಕ್ತಿ'

1. ಬಂಡಾಯ : ಇಂದೂಧರ ಹೊನ್ನಾಪುರ.
   ಪ್ರಸ್ತುತ ಸಾಹಿತ್ಯ, ರಾಮ್ ಬಜಾರ್. ಹಡಗಲಿ
   ಪುಟ : 55 ಬೆಲೆ : 4ರೂ.

2. ಒಡಲಾಳ ಕಿಚ್ಚು : ಸತೀಶಕುಲಕರ್ಣಿ
   ಸಂಕ್ರಮಣ ಪ್ರಕಾಶನ : ಧಾರವಾಡ
   ಪುಟ : 34 ಬೆಲೆ : 3ರೂ

ಈ ಎರಡೂ ಸಂಕಲನಗಳು ಬಂಡಾಯ ಧೋರಣೆಯನ್ನೊಳಗೊಂಡೂ ಬಂಡಾಯ ಕಾವ್ಯಕ್ಕಿರುವ ಎರಡು ಸಾಧ್ಯತೆಗಳನ್ನು ಹೇಳುವಂತೆ ಕಾಣುತ್ತದೆ. ಇಂದೂಧರರ ಕಾವ್ಯದ ಮೂಲಸ್ಥಾಯಿ ಸಿಟ್ಟು. ಈ ಸಿಟ್ಟು ಹಿಂಸೆಗೆ ಬಂದು ನಿಲ್ಲುತ್ತದೆ; ಅದು ಸ್ವಾಭಾವಿಕವು ಹೌದೇನೋ! ಆದರೆ ಸತೀಶ ಎಲ್ಲೂ ಆಕ್ರೋಶ ಗೊಳ್ಳುವುದಿಲ್ಲ. ಅವರದು ಗಾಢವಾದ ವಿಷಯವು ಅಲ್ಲವಾದರೂ ಅದನ್ನು ಸಾಧಿಸಬಲ್ಲರೆಂಬುದಕ್ಕೆ ಒಡಲಾಳ ಕಿಚ್ಚಿನಲ್ಲಿ ಆಧಾರ ಸಿಗುತ್ತದೆ. ಭಾರತದಂಥ ದರಿದ್ರ ದೇಶದಲ್ಲಿ ನೋವಿಗೆ ಕೊರತೆಯೇನೂ ಇಲ್ಲ. ಆ ನೋವಿಗೆ ಮಿಡಿಯಬಲ್ಲವರ ಸಂಖ್ಯೆ ಮಾತ್ರ ತುಂಬ ಕಡಿಮೆ. ಮೂಕವಾಗಿ ನೋವನ್ನನುಭವಿಸುತ್ತಿರುವ ದೊಡ್ಡ ಜನಸಮೂಹವೊಂದಕ್ಕೆ ಬಾಯಿಯಾಗಬೇಕೆನ್ನುವ ಕಾಳಜಿ ಇವರಿಬ್ಬರಲ್ಲೂ ಕಾಣುತ್ತದೆ.

ಬಂಡಾಯ ಕಾವ್ಯ ವಿಮರ್ಶಕನಿಗೆ ಒಂದು ಸವಾಲು ಅಥವಾ ಸವಾಲೇ ಅಲ್ಲ. ಈ ವಿರುದ್ಧ ಮಾತನ್ನ ಯಾಕೆ ಬರೆದೆ ಅಂದರೆ ನೆರೂದ' ಒಬ್ಬ ಬದ್ಧ ಲೇಖಕನಾಗಿಯೂ 'ಕಾವ್ಯ'ವನ್ನು ಕೊಟ್ಟ ಎಂಬ ಕಾರಣಕ್ಕಾಗಿ. ಇನ್ನೂ ಸಂಕಲನ

ತಂದಿರದ ಗೋವಿಂದಯ್ಯ ಉತ್ತಮ ಬಂಡಾಯ ಕಾವ್ಯವನ್ನು ಕೊಡಬಲ್ಲ ಸಾಮರ್ಥ್ಯ ವುಳ್ಳವರಾಗಿದ್ದಾರೆ. ಕಾವ್ಯಕ್ಕೆ ರಾಜಕೀಯ ಮುಖ ತೊಡಿಸಿಯೂ ಅದರ 'ಗುಣ' ಉಳಿಸಿದವರು ಪಾಟೀಲರು. (ಗಾಂಧೀಸ್ಮರಣೆಯ ಮೂರನೆಯ ಭಾಗ). ಒಟ್ಟು ನನ್ನ ಕಳಕಳಿಯಿಷ್ಟೆ: ಬದುಕಿನ ಕ್ರೂರ ವ್ಯಂಗ್ಯ ಮತ್ತು ಇಲ್ಲಿನ ಸಾಂಸ್ಕೃತಿಕ ವೈರುಧ್ಯಗಳು ಮಾನವೀಯ ಆತಂಕ, ವಿಷಾದಗಳ ಮುಖಾಂತರವಲ್ಲದೆ ಕ್ರೋಧ ದಲ್ಲಿ ಸ್ಖಲಿಸಿಬಿಡುವ ಅಪಾಯದಿಂದ ಬಂಡಾಯ-ಕಾವ್ಯ ತಪ್ಪಿಸಿಕೊಳ್ಳಬೇಕೆಂಬುದು.

ಇಂದೂಧರ ನೇರವಾಗಿ ದಲಿತರ ಬದುಕಿನ ಒಳ ಹೊರಗುಗಳನ್ನು ಮತ್ತು ನಿತ್ಯದ ಸಂಘರ್ಷವನ್ನು ಚಿತ್ರಿಸಲೂ ಪ್ರಯತ್ನಿಸುವುದರಿಂದ, ಪ್ರಜಾಪ್ರಭುತ್ವ, ಸಮಾನತೆ, ಬಂಧುತ್ವ ಎಂದು ಸದಾ ಕೂರೆಯುತ್ತಲೇ ಇರುವ ರಾಜಕಾರಣಿಗಳ ಮತ್ತು ಈ ದೇಶದ್ದು ಭವ್ಯ ಸಂಸ್ಕೃತಿ ಎಂದು ಬಜಾರಿಸುವ ಭಟ್ಟಂಗಿಗಳ ಢೋಂಗೀತನದ ಬಗೆಗೆ ಸಿಟ್ಟಿಟ್ಟುಕೊಂಡಿರುವುದರಿಂದ ಅವರ ಕಾವ್ಯಕ್ಕೆ ತೀವ್ರತೆಯಿದೆ. ಈ ತೀವ್ರತೆಯೇ ಸ್ಲೋಗನ್ ಆಗಿ ಬಿಡುತ್ತದೆ: ಶೀಘ್ರ ಪರಿಹಾರದ ಹಂಬಲಿಕೆ ಯಿಂದಾಗಿ. ಆದರೂ ಇಲ್ಲಿ 'ಗೆರೆ', ಇಪ್ಪತ್ತು, ತುಂಬಿದ ನಾನು, 'ಮರವೂ ನಾನೂ', 'ಇಂಡಿಯಾ ಮತ್ತು ದಲಿತ', 'ಕರಿಯರೆನ್ನುವ ನನ್ನವರು'ದಂಥ ಉತ್ತಮ ಕವನಗಳಿವೆ.

'ಇಪ್ಪತ್ತು ತುಂಬಿದ ನಾನು' ಶೋಷಿತನೊಬ್ಬನ ಇಂದ್ರಿಯಗಳನ್ನು ಹಾಳು ಗೆಡವಿದ, ಆ ಮೂಲಕ ಆತನನ್ನು impotent ಗೊಳಿಸುವ ವ್ಯವಸ್ಥೆ ಪ್ರತಿಕ್ರಿಯೆ ಕ್ರಮಕ್ರಮವಾಗಿ ಮತ್ತು ಏಕಕಾಲಕ್ಕೆ ಒಂದು ಜನಾಂಗವನ್ನು ಬಾಯಿ ಕಟ್ಟಿಸಿ ತನ್ನಿಚ್ಛೆಗೆ ಬಗ್ಗಿಸಿಕೊಂಡು ತಾನು ವಿಜೃಂಭಿಸುವ ಪ್ರಕ್ರಿಯೆಯನ್ನು ಇಲ್ಲಿ ಕೊಟ್ಟ. ಕೊನೆಯ ಮೂರು ಪದ್ಯಗಳಲ್ಲಿ ತನ್ನ ಸೇಡನ್ನು ಇಂದೂಧರ ವ್ಯಕ್ತಪಡಿಸುತ್ತಾರೆ. ಆದರೆ ಅದರ ಹಿಂದೆಯೇ ದಲಿತನಲ್ಲಿ ಅರಿವು ಮೊಳಕೆಯಾಡುತ್ತಿರುವುದು ಗೊತ್ತಾಗಿರುವುದರಿಂದ ವಾಚ್ಯವೆನಿಸು ತ್ತದೆ. ಇದು ಎಲ್ಲ ಕವನಗಳಲ್ಲೂ ಆಗಿದೆ. 'ಮರವೂ ನಾನೂ' ಸಂಕಲನದ ಒಳ್ಳೆಯ ಕವನ. ಕವಿ ತಾನು ಬೆಳೆಯುತ್ತ ನಡೆದಂತೆ ವ್ಯವಸ್ಥೆಯನ್ನು ಬೇರೆ ಬೇರೆ ಸ್ವರಗಳಲ್ಲಿ ಅರ್ಥೈಸಿಕೊಳ್ಳುವ ಬಗೆಯಿಲ್ಲಿದೆ. 'ಇಂಡಿಯಾ ಮತ್ತು ದಲಿತ', 'ಕರಿಯರೆನ್ನುವ ನನ್ನವರು' ಕವನಗಳು ಭಾರತೀಯ ಸಂದರ್ಭದಲ್ಲಿ ದಲಿತನ ಬದುಕಿನ ದುರಂತಗಳನ್ನು ಹೇಳುವಂಥವು.

ಹೊತ್ತ ಹುಟ್ಟಿಸಿ ಮುಳುಗಿಸಿ ಮುಯ್ಯರೆದರೂ<br>
ಹೊಟ್ಟೆ ತುಂಬುವುದಿಲ್ಲ, ಹೊಲ ಎತ್ತು<br>
ನೆಲಗುಡಿಸಿ ಹಾಕಿದರೂ ಗಟ್ಟಿ ತಳಪಾಯ<br>
ಸೂರಿನ ಸೆರಗು ಕಾಣುವುದಿಲ್ಲ.

ತಮ್ಮೆಲ್ಲ ಆಕ್ರೋಶದ ಮಧ್ಯೆ ಇಂದೂಧರ ಇಂಥ ಪದ್ಯ ಕೊಟ್ಟಿರುವುದೊಂದು ವಿಶೇಷ. 'ದರೋಡೆ' ಕವನಕ್ಕೆ ದಕ್ಕಬಹುದಾಗಿದ್ದ ವರ್ಣಸಂಕರದ ಮಹತ್ವದ ಆಯಾಮ ಇವರು ಶೋಷಣೆಯನ್ನೇ ಕುರಿತು ಕೊಡುವ ಒತ್ತಿನಿಂದಾಗಿ ತಪ್ಪಿಹೋಗಿದೆ. ಈ ಕವಿ ಆಳವಾದ ಒಳನೋಟ ಮತ್ತು ವಿಷಾದದ ಮಟ್ಟಕ್ಕೆ ಬಂದು ನಿಂತಾಗ 'ದರೋಡೆ' ಕವನದ ವಸ್ತು ದಕ್ಕಲಿ ಎಂದು ಹಾರೈಸಬಹುದಾಗಿದೆ. ಇನ್ನುಳಿದ ಕವನಗಳಲ್ಲಿ ಒಳ್ಳೆಯ ಭಾಗಗಳಿದ್ದೂ ಅವೆಲ್ಲ 'ಅದೇತನ' ದಿಂದ ತಪ್ಪಿಸಿಕೊಂಡಿಲ್ಲ.

ಬಂಡಾಯ ಕಾವ್ಯ ಪರಂಪರೆಯಲ್ಲಿ ಸತೀಶ ಕುಲಕರ್ಣಿಯವರ 'ಒಡಲಾಳ ಕಿಚ್ಚು' ಮಹತ್ವದ ಸಂಕಲನವಾಗಿ ಉಳಿಯಬಲ್ಲುದಾಗಿದೆ. ೧೬ ಕವನಗಳಿರುವ ಈ ಸಂಕಲನ ಆತ್ಮೀಯ ವಲಯದಲ್ಲಿನ ದುರಂತವೊಂದರಿಂದ ಪಾಠ ಕಲಿತು ಸಾಮಾಜಿಕ ಪಾತಳಿಗೆ ಚಾಚಿಕೊಳ್ಳುತ್ತದೆ. ಸಂಕಲನದ ಮೊದಲಲ್ಲಿರುವ 'ಸವಾಲು' ಕವನ ಹದಿನೆಂಟರ ಹದ್ದಿನಲ್ಲಿರುವ ತಂಗಿಯ ವೈಧವ್ಯದ ಬಗೆಗಿರುವುದು ತುಂಬ ಅರ್ಥಪೂರ್ಣ. ಈ Genuine ನೋವಿನ ಮೂಲಕ ಸತೀಶ ಸಾಮಾಜಿಕ ಕಾರ್ಯದತ್ತ ದೃಷ್ಟಿ ಹಾಯಿಸುತ್ತಾರಾದ್ದರಿಂದ ಇದು ಕೇವಲ ಮೋಜಿನ ಬರವಣಿಗೆಯನಿಸದೆ ಅಥೆಂಟಿಕ್ ಗುಣ ಗಳಿಸಿಕೊಂಡಿದೆ. ಇದರ ಜೊತೆಗೆ ಬರುವ, ವಾಚಾಮಯವಾಗದ ಸೂಕ್ಷ್ಮ ವ್ಯಂಗ್ಯ ಈ ಸಂಕಲನದ ಮತ್ತೊಂದು ಧನಾತ್ಮಕ ಗುಣ. 'ಆನೆ ಬಂತು ಆನೆ' ಕವನ ಒಂದು ಸಮರ್ಥ ಪ್ರತಿಮೆ.

ಮನುಷ್ಯ ಮನುಷ್ಯರ ನಡುವಿನ ಸಂಬಂಧಗಳನ್ನು ಅರ್ಥಪೂರ್ಣವಾಗಿ ಪುನರ್-ಸ್ಥಾಪಿಸುವ ಸಲುವಾಗಿ ಮತ್ತು ಸತ್ತ ಮೌಲ್ಯಗಳಿಗೆ ಆತುಕೊಂಡಿರುವ ಜನ ಸಮೂಹದಲ್ಲಿ ಅರಿವು ಮೂಡಿಸುವುದಕ್ಕಾಗಿ ದುಡಿಯುವ ನೇರ ಕವನಗಳು ಇಲ್ಲಿವೆ. 'ಈ ಬೀದಿಯವರು' ಕವನ ಸೂಳೆಯ ಬದುಕನ್ನು ತೀವ್ರವಾದ ನೋವಿನ ಮೂಲಕ ನೋಡಿದ ಕವನವಾದ್ದರಿಂದ 'ಸವಾಲು' ಮತ್ತು ಈ ಕವನದ ಹಿಂದಿನ ವಿಷಾದದಲ್ಲಿ ಸಾಮ್ಯ ಇರುವುದರಿಂದ ಗಾಢ ಪರಿಣಾಮ ಬೀರುತ್ತದೆ.

ಹಸಿವುಗಳ ತೆರೆಗಳು ತೆರೆತೆರೆಯಾಗಿ<br>ಅಪ್ಪಳಿಸುತ್ತವೆ, ಹುಲ್ಲಿನ ಛಾವಣಿ<br>ಕಂದೀಲುಗಳು ಬಿಕ್ಕುತ್ತವೆ. ರಾತ್ರಿಯ<br>ನಕ್ಷತ್ರಗಳು ಕೀವು ತುಂಬಿ ಸೋರುತ್ತವೆ.

ವರ್ತಮಾನದ ಒತ್ತಡದಲ್ಲಿ ಕೆರಳಿ ಬಂದ ಮಾತುಗಳಿವು. ಈ ಸಾಲು ಚಾಚಿಕೊಳ್ಳುವ ದೂರ ಮತ್ತು ಅರ್ಥಕೂಡ ದೊಡ್ಡದೆನಿಸುತ್ತದೆ. ಇಲ್ಲಿನ ಆಗು ಹೋಗು

ಗಳಿಗೆ ಮೈಕೊಟ್ಟು ನಿಂತವನ ಪ್ರತಿಕ್ರಿಯೆಯಿದು. ಈ ಎಚ್ಚರ ಕಾವ್ಯಕ್ಕೊಂದು ಅರ್ಥಪೂರ್ಣ ಆಯಾಮವನ್ನು ಕೊಡಬಹುದಾಗಿರುವಂತೆಯ ಕವಿತ್ವಕ್ಕೆ ಅಥವಾ ಸಾಹಿತ್ಯಕ್ಕೆ ಸವಾಲಾಗುವ ಸಾಧ್ಯತೆಯೂ ಇದೆ. ತಕ್ಕ ಮಟ್ಟಿಗೆ ಈ ಎರಡನ್ನೂ ಮೇಳೈಸುವ ಕೆಲಸವನ್ನು ಸತೀಶ ಮಾಡಿದ್ದಾರೆ. 'ಬಡಲಾಳ ಕಿಚ್ಚಿನ-ಕವಿತೆ' ಸತೀಶ ಬಯಸುವ ಹೊಸ ಸಮಾಜವೊಂದರ ಹಾರೈಕೆಯಾಗಿದೆ. ಇಂಥ ಪ್ರತಿಭಟನೆ ಈ ಸತ್ತ ಜನತೆಯಲ್ಲಿ ಮೊಳೆಯುತ್ತಿರುವ ಸಾಧ್ಯತೆಯನ್ನು ಕವಿ,

ಸೋರುವ ಸಾವಿರ ಜೋಪಡಿಗಳ
ಜವ್ವಳು ಹತ್ತಿ ಸತ್ತ ನೆಲದಲ್ಲಿ
ಕೆಂಡ ಕುದ್ದು ಬಿಳಿ ಬೂದಿ ಸಿಳಿ ಪಿಳಿ
ಕಣ್ಣು ಬಿಡುವಲ್ಲಿ —'ಕಂಡಿರುವೆ' ಎಂದು ಹೇಳುತ್ತಾರೆ.

ಸತೀಶರ ಕವನಗಳನ್ನು ಎರಡು ಭಾಗಗಳಲ್ಲಿ ವಿಂಗಡಿಸಬಹುದಾಗಿದೆ. ಮೇಲೆ ವಿವರಿಸಿದ್ದು ಒಂದು ಭಾಗವಾದರೆ ರಾಜಕೀಯ ಮುಖವೊಂದು ಇಲ್ಲಿನ ಇನ್ನುಳಿದ ಕವನಗಳಿಗೆ ತುರ್ತುಪರಿಸ್ಥಿತಿ ಮತ್ತು ಅದರ ನಂತರದ 'ಸ್ಥಿತಿ' ಈ ಕವನಗಳ ವಸ್ತು. ಸರ್ವಾಧಿಕಾರಿಯ ಧಿಮಾಕು, ಕರಾಮತ್ತು, ಪ್ರಶ್ನಾತೀತತೆ ಮತ್ತು ಒತ್ತಡದ ಎಲ್ಲ ಅರಿವಿರುವ ನಮಗೆ ಈ ಕವನಗಳು ಯೋಚಿಸ ಹಚ್ಚುತ್ತವೆ. ಅಂದರೆ ಈ ಕವಿ ತನ್ನ ಸಾಮಾಜಿಕ ಹೊಣೆಗಾರಿಕೆಯನ್ನ ಸಮರ್ಥವಾಗಿ ನಿಭಾಯಿಸುತ್ತಾರೆ. ಇಂಡಿಯಾ ನಾಯಕಿಯೊಬ್ಬರಲ್ಲಿ ಐಕ್ಯವಾಗಿ ಹೋದ ಮತ್ತು ಅವಳ ಆಡಳಿತ ವೈಖರಿಯನ್ನು ಈ ಕೆಳಗಿನ ಸಾಲುಗಳಲ್ಲಿ ನೋಡಬಹುದಾಗಿದೆ.

ಒಂದು ಎಚ್ಚರಿಕೆ :
ಮೊದಲು ಕೈಕಟ್ಟು, ಹಿಂಬಡ ಕೂಡಿಸು,
ತಲೆ ಸ್ವಲ್ಪ ಕೆಳಗೆ ಮಾಡು,
ಸರಿ, ಹೀಗಿರಬೇಕು, ಹಾ, ಹಾಗೇ ನಿಲ್ಲು
ಕಾರಣ ಗೊತ್ತಲ್ಲ? ನಾನು........

ಬದುಕಿನ ಭಾಷೆಗೆ ಹತ್ತಿರ ಬರಬೇಕಾದ ಅನಿವಾರ್ಯತೆ ಕಾವ್ಯಕ್ಕಿರಲೇಬೇಕಾಗಿದ್ದರೆ ಅದು ಇಷ್ಟು ಸಹಜವಾಗಿ, ಸಾಭಿನಯಪೂರ್ವಕವಾಗಿ ಬರಲಿ ಎನಿಸುತ್ತದೆ.

**—ಪದ್ಮರಾಜ್ ದಂಡಾವತಿ**

# ಬಂಗಾರಪ್ಪನವರಿಗೊಂದು ಪತ್ರ

ಪ್ರಿಯ ಶ್ರೀ ಬಂಗಾರಪ್ಪ,

ರೈತ ಚಳುವಳಿಯ ಸಂದರ್ಭದಲ್ಲಿ ವಿಧಾನ ಪರಿಷತ್ತಿನಲ್ಲಿ ನಾನು ಹೇಳಿದ ಯಾವ ಮಾತನ್ನೂ ಸರಕಾರ ಗಂಭೀರವಾಗಿ ಕಾಣದಿರುವುದು ಕನಿಕರದ ಸಂಗತಿ. ಉದಾಹರಣೆಗೆ ಸಕ್ಕರೆ ಉತ್ಪಾದನೆಯ ಸರಾಸರಿ ವೆಚ್ಚ ಪ್ರತಿ ಕೆ. ಜಿ.ಗೆ ರೂ 2–50 ಕ್ಕಿಂತ ಹೆಚ್ಚಲ್ಲ ಎಂದು ನಾನು ಹಲವು ಬಾರಿ ಹೇಳಿದ್ದೆ. ಈ ವೆಚ್ಚದ ಅಂದಾಜು ವಿವರಗಳು ಹೀಗೆ :

| | ರೂ | |
|---|---|---|
| ಕಬ್ಬು ಬೆಳೆಯುವ ಖರ್ಚು : ರೂ 1.20 | .60 | 1.20 |
| ಬೇಸಾಯ ಹಾಗೂ ಬೇಸಾಯಗಾರನ ಪಾಲು ಸೇರಿ | .60 | |
| ಮಜೂರಿಗಾಗಿ ಸಮಾರು | .30 | 0.30 |
| (ಅಧಿಕಾರಿಗಳ ಸಂಬಳ ಹಾಗೂ ಕೆಲಸಗಾರರ ಕೂಲಿ ಸೇರಿ) | | |
| ಉತ್ಪಾದನಾ ವೆಚ್ಚ : ಬಾಡಿಗೆ, ದರ, ತೆರಿಗೆ, ಉಗ್ರಾಣ, ಶಕ್ತಿ ಸೇರಿ | 1.00 | 1.00 |
| | ಒಟ್ಟು | 2.50 |

ಕಾರ್ಖಾನೆಗಳಲ್ಲಿ ಉತ್ಪಾದಿತವಾಗುವ ಸಕ್ಕರೆಯ ಶೇ. 35 ಭಾಗವನ್ನು ಮುಕ್ತವಾಗಿ ಮಾರಬಹುದು. ಉಳಿದ ಶೇ. 65 ಭಾಗ ಲೆವಿ ಸಕ್ಕರೆ ಎಂದು ಪರಿಗಣಿತವಾಗಿ ನ್ಯಾಯ ಬೆಲೆ ಮಾರುಕಟ್ಟೆಗೆ ಒದಗುತ್ತದೆ. ಆದರೆ ಈ ಶೇ. 65 ರ ಅರ್ಧಭಾಗ ನ್ಯಾಯ ಬೆಲೆ ಅಂಗಡಿಗಳ ಹಂದರದಲ್ಲಿ ಹುದುಗಿರುವ ಲಾಭಕೂಟದ ದೆಸೆಯಿಂದ ಮುಕ್ತ ಮಾರುಕಟ್ಟೆಯನ್ನು ಸೇರುವುದು ಗುಟ್ಟಿನ ಸಂಗತಿಯಲ್ಲ. ಪರಿಣಾಮ ಒಟ್ಟು ಉತ್ಪಾದನೆಯ ಶೇ. 60 ರಿಂದ ಶೇ 65 ಭಾಗ ಸಕ್ಕರೆ ಕೆಜಿಗೆ ರೂ 6ರಿಂದ ರೂ 7 ರ ವರೆಗಿನ ದರದಲ್ಲಿ ಮುಕ್ತವಾಗಿ ಮಾರಲ್ಪಡುತ್ತದೆ. ಉಳಿದ ಶೇ. 35ರಿಂದ 40 ಭಾಗ ಮಾತ್ರ

ನ್ಯಾಯ ಬೆಲೆ ಅಂಗಡಿಯಲ್ಲಿ ಕಿಲೋಗೆ ರೂ 2.85ರ ಬೆಲೆಗೆ ದೊರಕುತ್ತದೆ. ನೀವು ಮೂಟೆಯ ಮೊತ್ತವನ್ನು ಲೆಕ್ಕ ಹಾಕಿಕೊಳ್ಳಿ: ನನ್ನ ಈ ಅಂಕಿ ಸಂಖ್ಯೆಗಳು ನಿಖರವಾದವು ಎಂದು ನಿರೂಪಿಸಲು ಇಂಡಿಯನ್ ಎಕ್ಸ್‌ಪ್ರೆಸ್‌ನಲ್ಲಿ ವರದಿಯಾದ ತಾ. 14. ಮಾರ್ಚ್ ನವದೆಹಲಿಯ ಸುದ್ದಿಯೊಂದನ್ನು ಉದ್ಧರಿಸುತ್ತೇನೆ :

"ಮಹಾರಾಷ್ಟ್ರ ಸಕ್ಕರೆ ಉತ್ಪಾದಕ ಸಹಕಾರ ಸಂಘಗಳು ಸಕ್ಕರೆ ದರಗಳನ್ನು ಸ್ಥಿರಗೊಳಿಸಲು, ತಮ್ಮಲ್ಲಿರುವ ದಾಸ್ತಾನು ಸರಕನ್ನು ಕ್ವಿಂಟಾಲಿಗೆ ರೂ 300/-ರ ದರದಲ್ಲಿ ಸರಕಾರಕ್ಕೆ ಮಾರಲು ಸಿದ್ಧವಿರುವುದಾಗಿ ಹೇಳಿವೆ"

ಕಾರ್ಖಾನೆಗಳೇ ರೂ 300-ಕ್ಕೆ ಮಾರಲು ಸಿದ್ಧವಿರುವಾಗ ಉತ್ಪಾದನಾ ವೆಚ್ಚ ರೂ 250 ಕ್ಕಿಂತ ಹೆಚ್ಚಿರುವುದು ಸಾಧ್ಯವಿಲ್ಲ. ಪ್ರಶ್ನೆ ಏನೆಂದರೆ, ಉಳಿದ ಮೂಟೆ ಎಲ್ಲಿಗೆ ಹೋಗುತ್ತದೆ ? ಸರಕಾರ ತನ್ನ ಬಳಿ ಉತ್ತರವಿದ್ದರೆ ಸಾರ್ವಜನಿಕರಿಗೆ ತಿಳಿಸಬೇಕು. ನಾನು ಒಂದು ಕಿಲೋ ಅಕ್ಕಿಯ ಉತ್ಪಾದನೆಯ ವಿವರ ಸಹ ಹೇಳಿದ್ದೆ. ಒಂದು ಎಕರೆ ನೀರಾವರಿ ನೆಲದಲ್ಲಿ ಸರಾಸರಿ ಹದಿನೈದು ಕ್ವಿಂಟಾಲು ಭತ್ತ ಅಥವಾ ಹತ್ತು ಕ್ವಿಂಟಾಲು ಅಕ್ಕಿ ಉತ್ಪತ್ತಿಯಾಗುತ್ತೆ ಅಂದುಕೊಂಡರೆ, ಅದರ ಖರ್ಚಿನ ವಿವರಗಳು

| ಪ್ರತಿ ಕೆ.ಜಿ ಅಕ್ಕಿಗೆ : | ರೂ |
|---|---|
| ನೆಲಕಂದಾಯ ನೀರುಕಂದಾಯ ಅಭಿವೃದ್ಧಿ ತೆರಿಗೆ ಇತ್ಯಾದಿಗಳಿಗಾಗಿ | 0.10 |
| ಗೊಬ್ಬರ, ಕ್ರಿಮಿನಾಶಕ, ಬೀಜ, ಪಶುಆಹಾರ, ಇತ್ಯಾದಿಗಳಿಗಾಗಿ | 0.70 |
| ಬೇಸಾಯ, ಕೊಯಿಲು, ಕಣಬಡಿಯುವುದು ಇತ್ಯಾದಿಗಳ ಕೂಲಿ | 0.50 |
| ಸಾಲದ ಮೇಲಿನ ಬಡ್ಡಿ ಸಾಲದ ಮರುಪಾವತಿಗಳಿಗೆ | 0.15 |
| ನೇಗಿಲು ಗಾಡಿ ಎತ್ತುಗಳ ಬಳಕೆಯಿಂದ ಆಗುವ ದರಸವೆತಕ್ಕೆ | 0.10 |
| ಮಧ್ಯವರ್ತಿ, ಸಾರಿಗೆ, ಗಿರಣಿ, ತೆರಿಗೆ, ಚಿಲ್ಲರೆ ವ್ಯಾಪಾರಿ ಮುಂತಾದವರಿಗೆ | 0.75 |
| ರೈತನಿಗೆ ಉಳಿಯುವುದು | 0.20 |
| ಪ್ರತಿ ಕಿಲೋ ಅಕ್ಕಿಯ ಉತ್ಪಾದನಾ ವೆಚ್ಚ | 2.50 |

ನೀವು ನನ್ನ ಅಂದಾಜನ್ನು ಒಪ್ಪದಿದ್ದರೆ ಬೇರೆ ಸಂಖ್ಯಾ ವಿವರಗಳನ್ನು ಲೆಕ್ಕಹಾಕಿ ರೈತನಿಗೆ ಕಿಲೋ ಅಕ್ಕಿಗೆ ಇಪ್ಪತ್ತು ಪೈಸೆಗಿಂತ ಹೆಚ್ಚು ದೊರೆಯುವುದೆಂದು ತೋರಿಸಿ. ಇದೇ ರೀತಿಯ ಸಂಖ್ಯಾ ವಿವರಗಳನ್ನು ಆಹಾರತೈಲ ಮತ್ತು ಹತ್ತಿಯಂತಹ ಬೇರೆ ಸರಕುಗಳಿಗೂ ತಯಾರಿಸಬೇಕು. ಮುಖ್ಯವಾದ ಮಾತೆಂದರೆ ಭತ್ತ, ಸಕ್ಕರೆ, ಎಣ್ಣೆ ಅಥವಾ ಹತ್ತಿಯ ಬೆಳೆಗಾರ ಬೇರೆಯವರ ಹೊಟ್ಟೆ ತುಂಬಿಸಲು ಯಾಕೆ ಇಷ್ಟು ಕಡಿಮೆ

ಪ್ರತಿಫಲಕ್ಕೆ ಒಪ್ಪಾಡಬೇಕು ಎನ್ನುವುದು. ಜೊತೆಗೆ ಬಳಕೆದಾರನನ್ನೂ ಹಿಂಡಿ ಹಾಕಿ ಅವನನ್ನು ರೈತನ ವಿರುದ್ಧ ಎತ್ತಿ ಕಟ್ಟಲಾಗುತ್ತದೆ. ನಿಮಗೇ ಗೊತ್ತಿರುವಂತೆ ಇದನ್ನು ಡಾ. ಲೋಹಿಯಾ "ಬೆಲೆ ಕೊಳ್ಳೆ" ಎಂದು ಬಹಳ ವರ್ಷಗಳ ಹಿಂದೆಯೇ ಹೆಸರಿಸಿದ್ದರು. ನೀವು ಪ್ರಸಕ್ತ ಚಳುವಳಿಯನ್ನು ಪತ್ತಿಕ್ಕಲು ಕಣ್ಣೊರೆಸಬಹುದು, ಆದರೆ ನೀವು ಮೂಲ ಭೂತ ಪ್ರಶ್ನೆಗಳನ್ನು ಪರಿಹರಿಸಲೆತ್ನಿಸುವುದರಿಂದ ಮಾತ್ರ ಒಂದು ಅರ್ಥಪೂರ್ಣ ಪರಿಹಾರ ದೊರಕುವುದು.

ರೈತರು ಬಳಕೆದಾರರು ಪ್ರತಿನಿಧಿಗಳೊಡನೆ ಚರ್ಚೆನಡೆಸಿ, ಘರ್ಷಣೆಯ ಅಂಶ ಗಳನ್ನು ಗುರುತಿಸಿ ಎಲ್ಲರೂ ಒಪ್ಪಿಕೊಳ್ಳುವ ಸಮಾಧಾನಗಳನ್ನು ಹುಡುಕುವ ಹೊಸ ಜನ ತಾಂತ್ರಿಕ ಸಂಸ್ಕೃತಿಯನ್ನು ಲಕ್ಷ್ಯಕ್ಕೆತೆಗೆದುಕೊಳ್ಳದೆ ಸರಕಾರ ರಾಜೋದಾರ್ಯದಿಂದ ಏಕಪಕ್ಷೀಯವಾಗಿ ಪರಿಹಾರಗಳನ್ನು ಘೋಷಿಸುವ ಪಾಳೆಗಾರಿಕೆ ಕ್ರಮ ನನಗೆ ಅರ್ಥ ವಾಗುವುದಿಲ್ಲ. ಸರಕಾರ ಆಕಾಶದಲ್ಲಿ ನಿಂತು ಬಳಕೆದಾರರನ್ನು, ರೈತರನ್ನೂ ನಿಕೃಷ್ಟವಾಗಿ ನೋಡುತ್ತಾ ಅವರೊಡನೆ ಪತ್ರಿಕೆಗಳ ಮುಖಾಂತರ ಸಂವಾದಿಸುವ ಕ್ರಮ ತಪ್ಪಬೇಕು ಮತ್ತು ರೈತರ, ಬಳಕೆದಾರರನ್ನು ಪ್ರತಿನಿಧಿಸುವ ಸಂಸ್ಥೆಗಳ ಸಾಮುದಾಯಿಕ ವ್ಯಕ್ತಿತ್ವ ವನ್ನು ಸರಕಾರ ಗುರುತಿಸಿ ಕಾರ್ಮಿಕ ಸಂಸ್ಥೆಗಳೊಡನೆ ಈಗ ನೇರವಾಗಿ ಚರ್ಚಿಸುವಂತೆ ಈ ಸಂಸ್ಥೆಗಳೊಡನೆ ಸಹ ಮಾತುಕತೆ ನಡೆಸಬೇಕು, ಇದು ಸರಕಾರದ ಜವಾಬ್ದಾರಿ.

ರೈತರು, ಕಾರ್ಮಿಕರು ಮತ್ತು ಬಳಕೆದಾರರ ಚಳುವಳಿಗಳ ಮೂಲಕ ಎತ್ತಲಾಗುವ ಸಾಮಾಜಿಕ, ಆರ್ಥಿಕ ಪ್ರಶ್ನೆಗಳನ್ನು ಎದುರಿಸಲು ಪೋಲಿಸರನ್ನು ಬಳಸುವ ಕ್ರಮವನ್ನು ನಾನು ತೀವ್ರವಾಗಿ ಖಂಡಿಸುತ್ತೇನೆ.

ಪೋಲಿಸರ ವರ್ಗ ಪೂರ್ವಾಗ್ರಹಗಳು, ಪೋಲಿಸ್ ಠಾಣೆಗಳಲ್ಲಿ ಆರೋಪಿಗಳ ಕಾನೂನುಬದ್ಧ ಹಕ್ಕುಗಳ ಉಲ್ಲಂಘನೆ, ದಾಖಲೆಗಳನ್ನು, ತಿದ್ದಿಕೊಳ್ಳಲು ಅವರು ನಡೆಸುವ ನಾಚಿಗೆಗೇಡಿ ಸಾಕ್ಷ್ಯಾಧಾರಗಳನ್ನು ಫಿತೂರಿನಡೆಸಿ ಹಣಮಾಡಿಕೊಳ್ಳಲು ಬಯಸುವುದನ್ನು ನಾನು ಖಂಡಿಸುತ್ತೇನೆ. ಕಾರ್ಮಿಕರನ್ನು ಬಳಕೆದಾರರು, ಉತ್ಪಾದಕರು ಕೂಲಿ, ಬೆಲೆ, ಅಥವಾ ಆದಾಯಗಳಿಗಾಗಿ ಹೋರಾಟ ನಡೆಸಿದಾಗ ಅವರ ವಿರುದ್ಧ ಪೋಲೀಸರನ್ನು ಬಳಸುವುದು ಎಂಥ ಅಸಂಬದ್ಧ! ಈ ಪೋಲಿಸರು ಇದಕ್ಕಾಗಿಯೇ ಇದ್ದಾರೆಯೇ, ಇದಕ್ಕೆ ಪರಿಹಾರ ಸೂಚಿಸಬಲ್ಲರೇ? ಸಾಮಾಜಿಕ ಆರ್ಥಿಕ ಸಮಸ್ಯೆಗಳ ಪರಿವರ್ತನೆಗೆ, ಮೂಲಭೂತ ಬದಲಾವಣೆಗಳಾಗದೆ, ಅಭಿವೃದ್ಧಿ ಸಾಧಿಸುವುದು ಅಥವಾ ಕಾನೂನು ಶಿಸ್ತು ಪಾಲಿಸುವುದು ಹೇಗೆ ಸಾಧ್ಯ? ಈ ದಿನದ ಸವಾಲುಗಳು ಅಭಿವೃದ್ಧಿಗೆ ಸಂಬಂಧ ಪಟ್ಟ ವಾಗಿರುವಾಗ ಪೋಲಿಸರು ಕಾನೂನು ಮತ್ತು ಶಿಸ್ತನ್ನು ಪಾಲಿಸಬೇಕು. ಅದೂ ಅತಿರೇಕದ ಕ್ರಮಗಳಿಂದ! ಪೋಲಿಸರಿಗೆ ಸಾರ್ವಜನಿಕ ಸಮಸ್ಯೆಗಳ ನಡುವೆ ತಲೆ ಹಾಕುವ ಅವಶ್ಯಕತೆ

ಯಿಲ್ಲ. ಅವರನ್ನು ಎಲ್ಲರೀತಿಯ ಚಳುವಳಿಗಳ ಎದುರಿಗೆ ಒಡ್ಡುವುದರಿಂದ ಅವರು ವಿವೇಚನೆ ಕಳೆದುಕೊಂಡು ಪರಿಸ್ಥಿತಿ ಹದಗೆಡಿಸಿ ಜನರನ್ನು ಕೊಲ್ಲುತ್ತಾರೆ. ಚಳುವಳಿಗಳು ಬೆಳೆಯುತ್ತವೆ. ಈ ಪರಿಸ್ಥಿತಿ ಎದುರಿಸಲು ಯಾವ ರೀತಿಯ ತಯಾರಿಯನ್ನೂ ಹೊಂದಿರದ ಮತ್ತು ಅವರ ಶಿಕ್ಷಣದಿಂದಲೇ ಅಸಮರ್ಥರಾಗಿರುವ ಪೋಲೀಸರು, ಮುಖ್ಯವಾಗಿ ಕೆಳಗಿನ ದರ್ಜೆಯ ಪೋಲಿಸರು ಬಲಿಪಶುಗಳಾಗಿ ಹೆಸರು ಕಳೆದುಕೊಳ್ಳುತ್ತಾರೆ. ಅವರು ಹೊಡೆದರೂ ಅಯೋಗ್ಯರೇ ಹೊಡೆಯದಿದ್ದರೂ ಅಯೋಗ್ಯರೆ ಅವರ ಅತಿರೇಖಗಳನ್ನು ಕ್ಷಮಿಸಬೇಕೆಂದು ಇದರ ಅರ್ಥವಲ್ಲ. . ವಾಸ್ತವವಾಗಿ ಅವರ ವಿಕೃತ ಒರಟು ದಮನ ಕ್ರಿಯೆಗಳನ್ನು ನಾನು ಖಂಡಿಸುತ್ತೇನೆ. ಇವೆಲ್ಲವೂ ಪರಿವರ್ತಿತವಾಗಬೇಕು, ಸರಕಾರ ಈ ಬಗ್ಗೆ ಏನನ್ನೂ ಮಾಡಿಲ್ಲ ಮತ್ತು ಈಗಿರುವಂಥ ಸರಕಾರ ಏನನ್ನೂ ಮಾಡಲಾರದು ಸಹ. ಆದರಿಲ್ಲಿ ನಾನು ಬೇರೊಂದು ವಿಷಯದ ಬಗ್ಗೆ ಗಮನ ಸೆಳೆಯುತ್ತಿದ್ದೇನೆ. ಅದು ಸಾಮಾಜಿಕ ಆರ್ಥಿಕ ಪರಿಹಾರಗಳನ್ನು ಬಯಸುವ ಸಾಮಾಜಿಕ ಆರ್ಥಿಕ ಹೋರಾಟಗಳ ಸಂದರ್ಭದಲ್ಲಿ ಪೋಲಿಸರು ಯಾವ ರೀತಿ ವರ್ತಿಸಬೇಕು ಎನ್ನುವುದು. ಆದರೆ, ಸ್ಥಳೀಯ ಪೋಲಿಸರು ಮಿತಿ ಮೀರಿ ವರ್ತಿಸಿದಾಗ ನ್ಯಾಯಾಂಗ ತನಿಖೆ ಅತ್ಯಗತ್ಯವಾಗುತ್ತದೆ.

ನಿಮ್ಮ ಸರಕಾರ ಅಧಿಕಾರಕ್ಕೆ ಬಂದದ್ದು ಬೆಲೆ ಸ್ಥಿರತೆಯ ಭರವಸೆಯಿಂದ. ಆರು ತಿಂಗಳ ಕಾಲ ಕಾದು ನಿಮ್ಮ ಪೊಳ್ಳುತನವನ್ನು ಕಂಡುಕೊಂಡ ಜನತೆ ಅಭೂತಪೂರ್ವ ಚಳುವಳಿ ಹೂಡುತ್ತಿದ್ದಾರೆ. ಇದನ್ನು ವಿಧಾನಸಭೆಯಲ್ಲಿ ಯಜಮಾನಿಕೆ ಮಾತಾಡುತ್ತ ಎದುರಿಸುವುದಕ್ಕೆ ಬದಲು ಜನತೆಯ ಪ್ರತಿನಿಧಿಗಳನ್ನು ಚಳುವಳಿಯ ವಕ್ತಾರರನ್ನು ಕರೆದು ಎದುರು ಎದುರು ಮಾತಾಡಿ ಪರಿಹರಿಸಬೇಕಿತ್ತು.

ಈ ಪತ್ರವನ್ನು ನಾನು ಬರೆದಿದ್ದು, ಸರಕಾರದ ವಕ್ತಾರರು ರೈತಚಳುವಳಿ ಮತ್ತು ಬಳಕೆದಾರರ ಚಳುವಳಿಯ ಬಗ್ಗೆ ಚರ್ಚೆ ನಡೆವ ಸಂದರ್ಭದಲ್ಲಿ. ನಾನು ಎತ್ತಿದ ಕೆಲವು ಪ್ರಶ್ನೆಗಳನ್ನು ಜಾರಿಸಿದ್ದುದರಿಂದ, ಕಡೆಯದಾಗಿ, ನೀವು ವಿಧಾನ ಮಂಡಳಿಯಲ್ಲಿ ಮಾತು ಕೊಟ್ಟಿದ್ದಂತೆ ಶೀಘ್ರವಾಗಿ ರಾಜ್ಯಮಟ್ಟದ ರೈತರ ಆರ್ಥಿಕ ಸಮ್ಮೇಳನವನ್ನು (ರಾಜಕೀಯ ಪಕ್ಷ ಸಮ್ಮೇಳನವನ್ನಲ್ಲ) ಕರೆದು ಬೇಸಾಯಗಾರರ ಸಮಸ್ಯೆಗಳನ್ನು ಚರ್ಚಿಸಬೇಕೆಂದು, ಮತ್ತು ಬೆಲೆಏರಿಕೆ, ಅಭಾವ, ಕಲಬೆರಕೆ ಇವುಗಳನ್ನು ಚರ್ಚಿಸಲು ಶೀಘ್ರವಾಗಿ ರಾಜ್ಯಮಟ್ಟದ ಬಳಕೆದಾರರ ಪ್ರತಿನಿಧಿಗಳ ಸಮ್ಮೇಳನವನ್ನು ಕರೆಯಬೇಕೆಂದು ಒತ್ತಾಯಿಸುತ್ತೇನೆ.

ನಿಮ್ಮ ವಿಶ್ವಾಸಿ

**ಎಸ್. ವೆಂಕಟರಾವ್**

# ಒಳನೋಟ

ಒಂದು :

ನನ್ನ ಮಾನಸಿಕ ಗೊಂದಲದ ಬಗ್ಗೆ ಸಿ. ರಾಜಶೇಖರ 'ಕನಿಕರ' ಪಟ್ಟಿದ್ದಾರೆ. ಆದರೆ ನನಗೆ ಕಮ್ಯುನಿಸ್ಟರ ಗೊಂದಲ ಅರ್ಥವಾಗುತ್ತಿಲ್ಲ :

"ನಮ್ಮ ಸ್ವಾತಂತ್ರ್ಯ ಹೋರಾಟ ಹಸಿವಿನಿಂದ ಬಳಲುವ ಅತಿ ನಗ್ನ ಹಳ್ಳಿಯ ಜನತೆಯನ್ನು ಒಳಗೊಂಡಿದ್ದರೂ ಅದು ಉದ್ದೇಶಿತ ರಾಜಕೀಯ ಪ್ರಜ್ಞೆಯಿಂದ ಕೂಡಿರಲಿಲ್ಲ ಮತ್ತು ಕೇವಲ ಬಂಡವಾಳಗಾರರ ಕೈಗೊಂಬೆಯಂತೆ ವರ್ತಿಸಿದರು"— ಸಿ. ರಾಜಶೇಖರ. "ನಮ್ಮ ದೇಶದ ಸ್ವಾತಂತ್ರ್ಯ ಅಂದೋಲನವನ್ನು ಕಮ್ಯುನಿಸ್ಟರು ಎಂದೂ ವಿರೋಧಿಸಿದ್ದಿಲ್ಲ. ಬ್ರಿಟಿಷ್ ಸರಕಾರದಡಿ ಸೆರೆಮನೆವಾಸ ಅನುಭವಿಸಿದ ಅನೇಕ ಕಮ್ಯುನಿಸ್ಟರ ದಾಖಲೆಗಳು ಈಗಲೂ ಭಾರತ ಸರ್ಕಾರದ ಬಳಿ ಇವೆ"— ಶಂಕರ ಲಾಳಾಪುರ.

....ಕೇವಲ ಬಂಡವಾಳಗಾರರ ಕೈಗೊಂಬೆಯಂತೆ ವರ್ತಿಸಿದ ಅಂದೋಲನವನ್ನು ಕಮ್ಯುನಿಸ್ಟರು ವಿರೋಧಿಸಲಿಲ್ಲವೇಕೆ ? ಹೇಗೆ ಅದರಲ್ಲಿ ಪಾಲುಗೊಂಡರು ?

"ಇನ್ನು 1977ರ ಹೋರಾಟ ಕೇವಲ ಭ್ರಮೆ ಹಾಗೂ ತಾಂತ್ರಿಕ ಅಂಶಗಳಿಂದ ಕೂಡಿತ್ತು...." —ಸಿ. ರಾಜಶೇಖರ.

"ಜ್ಯೋತಿರ್ಮಯ ಬಸು, ಎ. ಕೆ. ಗೋಪಾಲನ್, ಇ.ಎಂ.ಎಸ್. ಮುಂತಾದವರು ಒಳಗೊಂಡಂತೆ ಸಾವಿರಾರು ಮಂದಿ ಮಾರ್ಕ್ಸಿಸ್ಟ್ ಪಕ್ಷದವರು ತುರ್ತು ಪರಿಸ್ಥಿತಿಯ ಅವಧಿಯಲ್ಲಿ ಸೆರೆಮನೆ ವಾಸ ಅನುಭವಿಸಿದ್ದರು...." —ಶಂಕರ ಲಾಳಾಪುರ.

ಭ್ರಮೆ ಹಾಗೂ ತಾಂತ್ರಿಕ ಅಂಶಗಳಿಂದ ಕೂಡಿದ ಹೋರಾಟದಲ್ಲಿ
'ವೈಜ್ಞಾನಿಕ' ಸಮಾಜವಾದಿಗಳು ಹೇಗೆ ಪಾಲುಗೊಂಡರು ?
ಅವರೂ ಭ್ರಮೆಗೆ ತುತ್ತಾಗಿದ್ದರೆ ?

ವ್ಯವಸ್ಥೆಯ ಬಾಹ್ಯ ಸಂಕೇತಗಳಾದ ಅತ್ಯಾಚಾರಗಳಿಗೆ ಸೈದ್ಧಾಂತಿಕ ಹಾಗೂ ಸಂಘಟನಾತ್ಮಕ ರೂಪ ಕೊಡುವುದು ಹಾಗೂ ಒಂದು ಆಂದೋಲನವನ್ನು ಕಟ್ಟಲು ಪ್ರಯತ್ನಿಸುವುದು - ಇವುಗಳ ನಡುವೆ ನನಗಂತೂ ವ್ಯತ್ಯಾಸ ಕಾಣುತ್ತವೆ - ಕಮ್ಯುನಿಸ್ಟರಿಗೆ ಕಾಣದಿರುವುದು ಸ್ವಾಭಾವಿಕ.

ಹಲವಾರು ವ್ಯಕ್ತಿಗಳ ಹಲವಾರು ಸಿದ್ಧಾಂತಗಳನ್ನು ನಂಬಿದ್ದ ಪಕ್ಷಗಳು, ಒಂದು ಉದ್ದೇಶವನ್ನು ಮಾತ್ರ ಸಾಧಿಸಲು ಜೊತೆಗೂಡಿ ನಂತರ ಮತ್ತೇ ಒಡೆದು ಹೋದಾಗ ಕಮ್ಯುನಿಸ್ಟರು ಆಶ್ಚರ್ಯ ಪಡುತ್ತಾರೆ. ಒಬ್ಬ ವ್ಯಕ್ತಿಯ 'ವೈಜ್ಞಾನಿಕ' ಸಿದ್ಧಾಂತದ ಅನ್ವಯದಲ್ಲೇ ಕಮ್ಯುನಿಸ್ಟ ಅಂದೋಳನ ಛಿಧ್ರವಿಚ್ಛಿದ್ರವಾಗುವುದನ್ನು ಸಮರ್ಥಿಸುತ್ತಾರೆ. ಇದು ಕಮ್ಯುನಿಸ್ಟರ ಸಿದ್ಧಾಂತದ 'ವೈಜ್ಞಾನಿಕತೆ'.

'ಜಾತಿ ಸತ್ಯ ವರ್ಗ ಮಿಥ್ಯ' ಎಂದು ಸಮಾಜವಾದಿಗಳು ಹೇಳುತ್ತಾರೆ ಎಂದು ಸಿ. ರಾಜಶೇಖರ ಹೇಳಿದ್ದಾರೆ – ಶಂಕರಾಚಾರ್ಯರ ಧಾಟಿಯಲ್ಲಿ. ಸಮಾಜವಾದಿಗಳು ಹೇಳಿದುದನ್ನು ತಮಗೆ ಅನುಕೂಲವಾಗುವ ಸೂತ್ರಗಳಲ್ಲಿ ಹೇಳುವುದರಲ್ಲಿ ಕಮ್ಯುನಿಸ್ಟರನ್ನು ಮೀರಿಸುವವರಿಲ್ಲ. ಸಮಾಜವಾದಿಗಳು ಹಾಗೆ ಹೇಳಿಲ್ಲ.

ಎದುರಾಳಿಯ ವಿಚಾರಗಳನ್ನು ಎದುರಿಸುವುದು ಸಾಧ್ಯವಾಗದೇ ಇದ್ದಾಗ ಇವರಿಗೆ ಎದುರಾಳಿ ವಕೀಲನಾಗಿರುವುದು ನೆನಪಿಗೆ ಬರುವುದೂ ಪರಂಪರೆಯೇ ಆಗಿಬಿಟ್ಟಿದೆ.

ಸಮಾಜವಾದಿಗಳನ್ನು 'ನೆಲೆ' ಇಲ್ಲದವರು ಎಂದಿದ್ದಾರೆ. ಆದರೆ ನನಗೆ ಇದು ಮುಖ್ಯವಲ್ಲ. ನಮ್ಮ ದೇಶದಲ್ಲಿ 'ಸಮಾಜವಾದ'ಕ್ಕೆ 'ನೆಲೆ' ಇದೆಯೇ ? ಅದನ್ನು ಸಮಾಜವಾದಿಗಳು ಒದಗಿಸಿಕೊಟ್ಟಿದ್ದಾರೆಯೇ ಎನ್ನುವುದು ಮುಖ್ಯ. ಒಂದು ಕಡೆ ಇಂದು 'ಸಮಾಜವಾದಿ' ಗಳಿಗೆ ನೆಲೆ ಇಲ್ಲ. ಆದರೆ 'ಸಮಾಜವಾದ'ಕ್ಕೆ 'ನೆಲೆ' ಇದೆ. ಆದರೆ ಇನ್ನೊಂದು ಕಡೆ ಜಗತ್ತಿನ ಹಲವಾರು ಕಡೆಗಳಲ್ಲಿ ಕಮ್ಯುನಿಸ್ಟರಿಗೆ 'ನೆಲೆ' ಇದ್ದರೂ ಅಲ್ಲೆಲ್ಲ ಅದರ ಆದರ್ಶಗಳಾದ 'ಸಮಾನತೆ' ಹಾಗೂ 'ಸ್ವಾತಂತ್ರ್ಯ' ಗಳಿಗೆ ನೆಲೆ ಇಲ್ಲ. ಇವೆರಡರಲ್ಲಿ ನಾನು ಮೊದಲಿನ ಸ್ಥಿತಿಯನ್ನು ಬಯಸುತ್ತೇನೆ ಬಹುಶಃ ರಾಜಶೇಖರ ಅವರು ಎರಡನೆಯದನ್ನು ಬಯಸುತ್ತಾರೋ ಏನೋ ?

ಬಾಪು ಹೆದ್ದೂರಶೆಟ್ಟಿ

ಎರಡು :

# ಪಾಪ್ಯುಲರ್ ಪ್ರಿಜ್ಯುಡಿಸ್ - ಪ್ರತಿಕ್ರಿಯೆ

ಕಮ್ಯುನಿಸ್ಟರ ಮೇಲಿನ ಪ್ರಖ್ಯಾತವಾದ ಪೂರ್ವಾಗ್ರಹ ಪೀಡಿತ ಪ್ರತಿಕ್ರಿಯೆಗಳ ಸಾಲಿಗೆ ಜೂನ್ ತಿಂಗಳ 'ಶೂದ್ರ' ದಲ್ಲಿನ ಬಾಪು ಹೆದ್ದೂರಶೆಟ್ಟರ ಪ್ರತಿಕ್ರಿಯೆಯೂ ಸೇರುತ್ತದೆ ಎಂದು ಬರೆಯದೆ ಬೇರೆ ದಾರಿಯಿಲ್ಲ. ಯಾಕೆಂದರೆ........? 'ಕಮ್ಯುನಿಸ್ಟರು ಹಿಂದೊಮ್ಮೆ ಕಾಂಗ್ರೆಸ್ ಸೋಶಿಯಲಿಸ್ಟ್ ಬಾವುಟದ ಕೆಳಗೆ ಬಂದು ಆ ಪಕ್ಷವನ್ನೇ ಕಬಳಿಸಲು ಪ್ರಯತ್ನಿಸಿದರು' ಎಂಬ ಶೆಟ್ಟರ ಚರಿತ್ರೆಗೂ ; '40 ವರ್ಷಗಳಿಗೆ ಮುಂಚೆ ಕಾಂಗ್ರೆಸ್ ಸೋಶಿಯಲಿಸ್ಟ್ ಪಾರ್ಟಿಯನ್ನು ಕಮ್ಯುನಿಸ್ಟರು ಕೈಗೆತ್ತಿಕೊಂಡಾಗ ಸಮಾಜವಾದಿಗಳು ಹುಯಿಲೆಬ್ಬಿಸಿದರು' ಎಂಬ ಹಿರಿಯ ಸಮಾಜವಾದಿ ಎಸ್. ವೆಂಕಟರಾಮ್ ಅವರ ಚರಿತ್ರೆಗೂ (ಮೇ 'ಶೂದ್ರ'ದಲ್ಲಿ ವೆಂಕಟರಾಮ್ ಲೇಖನಗಳನ್ನು ನೋಡಿ) ನಿಷ್ಪಕ್ಷಪಾತಿಗಳಿಗೆ ವ್ಯತ್ಯಾಸ ಕಾಣುತ್ತದೆ. ಅಂಬೇಡ್ಕರ್ ಜನಿಸಿದ ಏ. 14ರ ದಿನವನ್ನು 'ದೌರ್ಜನ್ಯವಿರೋಧಿ' ದಿನವನ್ನಾಗಿ ಆಚರಿಸಬೇಕೆಂದೂ, ಅದಕ್ಕೆ ಎಲ್ಲಾ ಎಡಪಂಥೀಯ ಪಕ್ಷಗಳು, ಸಂಘಸಂಸ್ಥೆಗಳು ಮತ್ತು ವ್ಯಕ್ತಿಗಳನ್ನು ದಲಿತ ಸಂಘರ್ಷ ಸಮಿತಿಯು ಅಧಿಕೃತವಾಗಿ ಆಹ್ವಾನಿಸಿರುವ ದಾಖಲೆಗಳಿವೆ.

ದಲಿತರನ್ನು ಕೊಂದ, ಈಗಲೂ ಕೊಲ್ಲುತ್ತಿರುವ ಕಾಂಗೈ, ಕಾಂಗ್ರೆಸ್, ಜನತಾ, ಬಿ.ಜೆ.ಪಿ. ಮುಂತಾದ ಬಲ ಪಂಥೀಯ ರಾಜಕೀಯ ಪಕ್ಷಗಳನ್ನು, ಸಂಘ ಸಂಸ್ಥೆಗಳನ್ನು ಮತ್ತು ವ್ಯಕ್ತಿಗಳನ್ನು ಏ. 14ರ ಕಾರ್ಯಕ್ರಮಕ್ಕೆ ಆಹ್ವಾನಿಸಬಾರದು ಎಂಬ ನಿಲುವನ್ನು ದ.ಸಂ.ಸ ಯು ತೆಗೆದುಕೊಂಡಿತ್ತು. ಜೊತೆಗೆ ಅಂಬೇಡ್ಕರ್ ಅವರು ಸ್ಥಾಪಿಸಿದ್ದ ರಿಪಬ್ಲಿಕ್ ಪಕ್ಷದ ರಾಜ್ಯ ಘಟಕವು ಬಲ ಪಂಥೀಯ ರಾಜಕಾರಣಿಗಳ ಕೈಯಲ್ಲಿ ಇರುವುದರಿಂದ ಅವರನ್ನು ಆಹ್ವಾನಿಸಲೂ ಇಲ್ಲ.

....ಇನ್ನು 'go to hell' ಬಗ್ಗೆ ಪ್ರಾಮಾಣಿಕವಾದ ಉತ್ತರ ಕೊಡುವುದು ಸಭ್ಯರಾದ ಡಿ. ಆರ್. ನಾಗರಾಜ್ ಅವರ ಜವಾಬ್ದಾರಿಯೇ ವಿನಃ ನನ್ನದಲ್ಲ. ಶೆಟ್ಟರು ತಿಳಿಸಿರುವಂತೆ ನಮ್ಮೀನಾಡಿನಲ್ಲಿ ನಾಲ್ಕಾರು ಕಮ್ಯುನಿಸ್ಟ್ ಪಕ್ಷಗಳಿವೆ ಎನ್ನುವುದು ನಿಜ. ಆದರೆ ಒಬ್ಬೊಬ್ಬರ ತಲೆ ಕಡಿಯುವ ಸಣ್ಣ ರಾಜಕೀಯದಲ್ಲಿ ತೊಡಗಿರುವ ಜನತಾ ತುಣುಕುಗಳಂತೆ ಈ ಕಮ್ಯುನಿಸ್ಟ್ ಪಕ್ಷಗಳು ಇಂದು ಕಾರ್ಯನಿರ್ವಹಿಸುತ್ತಿಲ್ಲ.

ಸಿ. ಪಿ. ಎಂ. ನೇತೃತ್ವದಲ್ಲಿ ಒಂದಾಗಿರುವ ಅವು ಪ. ಬಂಗಾಳ, ಕೇರಳ ಮತ್ತು ತ್ರಿಪುರ ರಾಜ್ಯಗಳಲ್ಲಿ ತಮ್ಮ ವಿರೋಧಿಗಳೂ ಒಪ್ಪಿಕೊಂಡಿರುವಂತಹ ದಕ್ಷ, ಶುದ್ಧ ಆಡಳಿತವನ್ನು ನೀಡಿವೆ.

**ತಮ್ಮ ಪಕ್ಷವನ್ನೇ ವಿಸರ್ಜಿಸಿಕೊಂಡು .**

ಜನತಾ, ಲೋಕದಳ, ಜನತಾ ಎಸ್, ಅರಸು ಕಾಂಗ್ರೆಸ್, ಕಡೆಗೆ ಇಂದಿರಾ ಕಾಂಗ್ರಸ್ಸೂ ಸೇರಿದಂತೆ ಸಿಕ್ಕ ಸಿಕ್ಕ ಪಕ್ಷಗಳನ್ನೆಲ್ಲಾ ಸೇರಿಸಿಕೊಂಡು ಪ್ರಜಾಪ್ರಭುತ್ವದ ರಕ್ಷಣೆಯ ಬಗ್ಗೆ ಬೊಗಳೆ ಭಾಷಣ ಮಾಡುವ ಸೋಶಿಯಲಿಸ್ಟರನ್ನು ಭಾರತದ ಬಡಜನ ಚೆನ್ನಾಗಿ ಅರ್ಥಮಾಡಿಕೊಂಡಿದ್ದಾರೆ.

ಬಾಪು ಹೆದ್ದೂರ ಶೆಟ್ಟರು ಬರೆದುಕೊಂಡಿರುವ ಇನ್ನೂ ಕೆಲವು ಮಾತುಗಳೆಂದರೆ "ನಾನು ಬರೀ ಕಮ್ಯುನಿಸ್ಟರನ್ನು ಟೀಕಿಸುತ್ತೇನೆಂದು ಈ ಜನ ಗುಲ್ಲೆಬ್ಬಿಸುತ್ತಾರೆ. ಟೀಕೆಯನ್ನು ಸ್ವಾಗತಿಸುವ ವಿಶಾಲ ಮನೋಭಾವ ಕಮ್ಯುನಿಸ್ಟರಲ್ಲಿ ಇಲ್ಲ" ಇತ್ಯಾದಿ ಏನೇನೋ.... ಅಧ್ಯಯನ ಮತ್ತು ಜನಪರ ಹೋರಾಟಗಳಲ್ಲಿ ಸದಾ ತಲ್ಲೀನರಾಗಿರುವ ಕಮ್ಯುನಿಸ್ಟರಿಗೆ, ಅವರನ್ನು ಟೀಕಿಸಿಕೊಂಡು ಹೋಗುವ ಎಲ್ಲಾ ಚೌಚೌ ಪಾರ್ಟಿಗಳ ಬಗ್ಗೆ ಗುಲ್ಲೆಬ್ಬಿಸಿಕೊಂಡು ಹೋಗಲು ಸಮಯವೇ ಇಲ್ಲ, 'ಶೂದ್ರ' ದಂತಹ ಗಂಭೀರ ಓದುಗರನ್ನು ಗೊಂದಲಕ್ಕೀಡುಮಾಡುವ ಸಣ್ಣ ಕೆಲಸಗಳನ್ನೋ, ಚೇಷ್ಟೆಗಳನ್ನೋ ಯಾರಾದರೂ ಮಾಡಿದಾಗ, ಪತ್ರಿಕೆಯ ಮತ್ತು ಓದುಗರನ್ನು ಮಾತ್ರ ಗಂಭೀರವಾಗಿ ಪರಿಗಣಿಸಿ ಉತ್ತರ ಕೊಡುವ ಅನಿವಾರ್ಯತೆಗೆ ಕಮ್ಯುನಿಸ್ಟರು ಬರುತ್ತಾರೆ.

"ಕಮ್ಯುನಿಸಂ ಒಂದು ಅಪಾಯಕಾರಿ ವ್ಯವಸ್ಥೆಯಾಗಿ ಇಂದು ಬೆಳೆಯುತ್ತಿದೆ" ಎಂದೂ ಸಹ ಬಾಪು ತಮ್ಮ ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ. ಅವರವರ ಅಭಿಪ್ರಾಯಗಳನ್ನು ವ್ಯಕ್ತಮಾಡಲು ಸರ್ವರಿಗೂ ಹಕ್ಕಿದೆ. ಆದರೆ ಜನರು ಮಾತ್ರ ತಮಗೆ ಅನುಕೂಲದಂತಹ ವ್ಯವಸ್ಥೆಯನ್ನು ತಮ್ಮದನ್ನಾಗಿಸಿಕೊಳ್ಳುತ್ತಾರೆ. ಶೆಟ್ಟರು ತಿಳಿಸಿರುವ ಇನ್ನು ಕೆಲವು ಸಂಗತಿಗಳಾದ ರಶಿಯಾದಲ್ಲಿನ ವೇತನ ವ್ಯತ್ಯಾಸ, ಸ್ವಾತಂತ್ರ್ಯ ಹರಣ, ಭಿನ್ನಮತೀಯರ ದುರ್ಗತಿ ಮುಂತಾದ ವಿಷಯಗಳು ಸ್ವಲ್ಪ ಮಟ್ಟಿಗೆ ನಿಜ. ಜಮೀನ್ದಾರಿ ಮತ್ತು ಬಂಡವಾಳವಾದಿ ವ್ಯವಸ್ಥೆಯಿಂದ ಸಮತವಾದಿ ವ್ಯವಸ್ಥೆಗೆ ಸ್ಥಿತ್ಯಾಂತರ ಹೊಂದುತ್ತಿರುವ transistary periodನಲ್ಲಿ ಸ್ವಹಿತಗಳನ್ನು ಕಳೆದುಕೊಳ್ಳುವ ಪ್ರತಿಗಾಮಿ ಶಕ್ತಿಗಳು, ಪ್ರತಿಕ್ರಾಂತಿಕಾರಿ ಶಕ್ತಿಗಳು ಹೊಸ ವ್ಯವಸ್ಥೆಗೆ ಒಡ್ಡುವ ಸವಾಲಗಳನ್ನು ಎದುರಿಸಲು ಕೆಲವು ಕಠಿಣ ಕ್ರಮಗಳನ್ನು ತೆಗೆದುಕೊಳ್ಳುವುದು ಅನಿವಾರ್ಯ. ಆದ್ದರಿಂದ ಪರಿಸ್ಥಿತಿ ಹದಗೆಟ್ಟಿದ್ದು ಹಾಗೆ ಕಾಣುವುದು ಸಹಜ, ಒಂದು ಪಕ್ಷ

ಪ್ರತಿರೋಧಗಳಾಗಿದ್ದರೂ ಅದಕ್ಕೆ ಮಾರ್ಕ್ಸ್‌ವಾದವಾಗಲಿ ಅಥವ ಕಮ್ಯುನಿಸ್ಟ್ ಸಿದ್ಧಾಂತ ವಾಗಲೀ ಹೇಗೆ ಜವಾಬ್ದಾರಿ ?

ಕಮ್ಯುನಿಸ್ಟರು ಸೈದ್ಧಾಂತಿಕವಾಗಿ ಹಿಂಸೆಯಲ್ಲಿ ನಂಬಿಕೆ ಇಟ್ಟಿದ್ದಾರೆ ಎಂದು ಬಾಪ್ಪ ಬರೆದಿರುವ ಬಗ್ಗೆ ಇಲ್ಲಿ ಚರ್ಚೆ ಅನಾವಶ್ಯಕ. ಯಾಕೆಂದರೆ ತುರ್ತುಪರಿಸ್ಥಿತಿ ಅವಧಿ ಯಲ್ಲಿ 'ಶೂದ್ರ' ಮಾಡಿದಷ್ಟೇ ಒಳ್ಳೆಯ ಕೆಲಸ ಮಾಡಿದ 'ಆಂದೋಲನ' ಪತ್ರಿಕೆಯಲ್ಲಿ ಈ ಕುರಿತು ವಿವರವಾದ ಚರ್ಚೆ ನಡೆದಿದೆ. [ಸಂದರ್ಭ : 'ನರಹತ್ಯೆಯ ತ್ರಿಮೂರ್ತಿ ಗಳು - ಯಾರ್ರುಬೇಕು' ? ಎಂಬ ಲಂಕೇಶರ ಲೇಖನ ಕುರಿತು]

ರಶಿಯಾವು ಇಂದಿರಾಗೆ ಇತ್ತ ಮಿತ್ರತ್ವದ ಹಸ್ತವನ್ನು (ತುರ್ತುಪರಿಸ್ಥಿಯ ಸಮರ್ಥನೆ) ಬಾಂಗ್ಲಾದೇಶ ವಿಮೋಚನೆಯ ಸಂದರ್ಭದಲ್ಲಿ ಚೀನಾವು ಪಾಕಿಸ್ತಾನಕ್ಕೆ ಇತ್ತ ಮಿತ್ರತ್ವದ ಹಸ್ತವನ್ನು ಭಾರತದ ಮಾರ್ಕ್ಸ್‌ವಾದಿ ಕಮ್ಯುನಿಸ್ಟ್ ಪಕ್ಷ ಖಂಡಿಸಿದ್ದು, ವಿರೋಧಿಸಿದ್ದು ಶೆಟ್ಟರ ಕಣ್ಣಿಗೆ ಕಾಣಿಸದಿದ್ದರೆ ಜಗತ್ತಿನ ಕಣ್ಣಿಗೆ ಕಾಣಿಸುವುದಿಲ್ಲವೆಂದು ಅರ್ಥವೆ? ಅಥವ ಶೆಟ್ಟರು ಅನುಕೂಲಕ್ಕೆ ತಕ್ಕಂತೆ ಕಣ್ಣು ಮುಚ್ಚಿಕೊಳ್ಳುತ್ತಾರೊ? ರಶಿಯಾವು ಇಂದಿರಾಗೆ ಬರೀ ಮಿತ್ರತ್ವದ ಹಸ್ತ ಮಾತ್ರ ಕೊಡಲಿಲ್ಲ. ಅದರ ಜೊತೆಗೆ ಇಂಡಿಯಾಕ್ಕೆ ಭಿಲೈ. ಬೊಕಾರೊ ಉಕ್ಕು ಘಟಕಗಳನ್ನು, ಹೃಶಿಕೇಶದಲ್ಲಿನ ಸರ್ಜಿಕಲ್ ಇನ್‌ಸ್ಟ್ರುಮೆಂಟ್ಸ್ ಕೇಂದ್ರವನ್ನು, ನೈವೇಲಿಯ ಲಿಗ್‌ನೈಟ್ ಕಾರ್ಪೋರೇಶನನ್ನು, ಹೈದರಾಬಾದ್, ಲಕ್ನೊ, ಕೋಲಾಬರ್‌ನಲ್ಲಿ ಎಚ್.ಎ.ಎಲ್. ಮಿಗ್ ಪ್ಲಾಂಟ್ ಘಟಕಗಳನ್ನು, ರಾಜಾಸ್ತಾನದ ಸೂರತ್‌ಘರ್‌ನಲ್ಲಿ ಮಾದರಿ ಕೃಷಿಕೇಂದ್ರವನ್ನು ಕೊಟ್ಟಿದೆ. ರಶಿಯಾದ ಈ ಎಲ್ಲ ನೆರವು ಸಾರ್ವಜನಿಕ ಕ್ಷೇತ್ರಗಳಲ್ಲಿ ಹೂಡಲ್ಪಟ್ಟಿದೆ. ಪ್ರತಿ ಫಲ ವಾಗಿ ರಶಿಯಾ ತೆಗೆದುಕೊಂಡು ಹೋಗುತ್ತಿರುವುದೇನು? ಶೇ. ಎರಡೂವರೆ ಪ್ರಮಾಣದ ಬಡ್ಡಿ ! ಈ ಕನಿಷ್ಟ ಪ್ರಮಾಣದ ಬಡ್ಡಿ ಸಾಲವು ನಿಜಕ್ಕೂ ಲಾಭದಾಯಕ ಎಂದು ನಮ್ಮ ಬೂರ್ಜ್ವಾ ಅರ್ಥಶಾಸ್ತ್ರಜ್ಞರೇ ಅಭಿಪ್ರಾಯಪಡುತಿದ್ದಾರೆ ! ಈ ದೇಶದಲ್ಲಿ ಎಣ್ಣೆ ಸಿಕ್ಕುವ ಸ್ಥಳಗಳನ್ನು ಹುಡುಕಿ ಕೊಡಿ ಎಂದು ಭಾರತ ಸರ್ಕಾರ ಅಮೆರಿಕನ್ ತಜ್ಞರನ್ನು ಕೇಳಿದಾಗ; ಚೆನ್ನಾಗಿ ಪ್ರವಾಸ ಮಾಡಿದ ಆ ದೇಶದ ತಜ್ಞರ ತಂಡ, ಈ ದೇಶದಲ್ಲಿ ಎಣ್ಣೆಯೇ ಇಲ್ಲವೆಂದು ವರದಿ ಕೊಟ್ಟು ವಾಪಸ್ ಹೋಯಿತು. ಆದರೆ ಇಂದು ಇದೇ ದೇಶದಲ್ಲಿ ಉತ್ಪಾದಿಸುತ್ತಿರುವ ಎಣ್ಣೆ ಸ್ಥಳಗಳನ್ನು ಹುಡುಕಿ ಕೊಟ್ಟವರು ರಶಿಯನ್ ತಜ್ಞರು. ಇವರು ಸಲ್ಲಿಸಿದ್ದ ವರದಿಯನ್ನೂ ಆರು ವರ್ಷಗಳ ಕಾಲ ಸರ್ಕಾರಕ್ಕೆ ಸಲ್ಲಿಸದೆ ಮುಚ್ಚಿಟ್ಟಿದ್ದ ಕೇಂದ್ರ ಸರ್ಕಾರದ ಕಾರ್ಯದರ್ಶಿಯ ನೀಚ ಕೆಲಸವನ್ನು ಸಂಸತ್ತಿನ ಮುಂದೆ ಮಂಡಿಸಿ ಸರ್ಕಾರವನ್ನು ಗಾಬರಿಗೊಳಿಸಿದವರೂ ಸಿ.ಪಿ.ಎಂ.ನ ಜ್ಯೋತಿರ್‌ಮಯಿಬಸು ಅವರು.

ಬಾಂಗ್ಲಾದೇಶದ ವಿಮೋಚನೆಯ ಸಮಯದಲ್ಲಿ ಅಣುಸಜ್ಜಿತ ಶಸ್ತ್ರಾಸ್ತ್ರಗಳೊಡನೆ ಬಂಗಾಳಕೊಲ್ಲಿಗೆ ಆಗಮಿಸಿದ್ದ ಅಮೆರಿಕಾದ 7th Fleet ಯುದ್ಧ ನೌಕೆ ಹಿಂತಿರುಗಿದ್ದು, ಅಷ್ಟೇ ಸಜ್ಜಿತ ರಶ್ಯನ್ ಯುದ್ಧ ನೌಕೆ ಭಾರತದ ಪರ ಹಿಂದೂ ಮಹಾಸಾಗರದಲ್ಲಿ ಕಾಣಿಸಿಕೊಂಡ ನಂತರವೇ. ಭಾರತ ಸಮೃದ್ಧಿಯ ಉಸಿರು ಬಿಟ್ಟಿದ್ದು ರಶಿಯಾ ನೌಕೆ ಕಂಡ ನಂತರ ಎಂಬುದನ್ನು ಮರೆಯಲು ಸಾಧ್ಯವೆ?

ಕಷ್ಟಕಾಲದಲ್ಲಿ ರಶಿಯಾದ ಈ ಸಹಾಯ ಬರದೇ ಇದ್ದಿದ್ದರೆ. ಸೋಶಿಯ ಲಿಸ್ಟರೂ ಸೇರಿದಂತೆ ನಮ್ಮ ಪ್ರೀತಿಯ ಅದೆಷ್ಟು ಜನ ಅಳಿಸಿ ಹೋಗುವ ಅನಾಹುತದ ಅಪಾಯವಿತ್ತು ! ರಶಿಯನ್ ಟೀಕಾಕಾರರು ಪ್ರಾಮಾಣಿಕವಾಗಿ ಉತ್ತರ ಕೊಡಲಿ.

ಸ್ವಾವಲಂಬನೆಯ ಮಂತ್ರ ಹೇಳಿಕೊಟ್ಟ ಗಾಂಧೀಜಿಯವರು ಕೂಡ ಇಂದು ಬದುಕಿದ್ದಿದ್ದರೆ ತಮ್ಮ ನಿಜ ಶಿಷ್ಯರೆಂದು ಹೇಳಿಕೊಂಡು ಕೊಬ್ಬುತ್ತಿರುವ ಕಾಂಗ್ರೆಸ್-ಜನತಾ ನಾಯಕಮಣಿಗಳ ವಿರುದ್ಧ ಇಂದು ಬೀದಿ ಬೀದಿಯಲ್ಲಿ ಹೋರಾಡುತ್ತಿದ್ದರು. ತಮ್ಮ ಶಿಷ್ಯರ ಬಗ್ಗೆ ತಾವೇ ನಾಚಿಕೆಪಟ್ಟುಕೊಳ್ಳುತ್ತಿದ್ದರೆಂಬುದರಲ್ಲಿ ಸಂಶಯವಿಲ್ಲ. ಬಾಪು ಹೇಳಿರುವಂತೆ 1967-71ರ ನಡುವೆ ಮತ್ತು 71-77ರ ನಡುವೆ ಪಶ್ಚಿಮ ಬಂಗಾಳದಲ್ಲಿ ಕೊಲೆಗಳಾಗಿದ್ದು, ಬಾಂಬುಗಳು ಸಿಡಿದದ್ದು ನಿಜ. ಈ ಎರಡೂ ಅವಧಿಯ ಅನಗತ್ಯ ಹಿಂಸೆ, ಕೊಲೆ, ಬಾಂಬು ಸಿಡಿತ ಮಾಡಿದವರು ಕಾಂಗ್ರೆಸ್ಸಿಗರು ಮತ್ತು ಅವರ ಗೂಂಡಾ ತಂಡಗಳು. ಆದರೆ ಕೆಟ್ಟ ಹೆಸರು ಬಂದಿದ್ದು ಕಮ್ಯುನಿಸ್ಟರಿಗೆ! ಬಾಪು ಬರೆದಿರುವಂತೆ : ಕಮ್ಯುನಿಸ್ಟರು ಒಂದು ಪಕ್ಷ ಕೊಲೆ ಮಾಡಿದ್ದರೆ, ಬಾಂಬ್ ಸಿಡಿಸಿದ್ದರೆ, ಇದೇ ಕಮ್ಯುನಿಸ್ಟರನ್ನು ಕಳೆದ 77ರ ಚುನಾವಣೆಗಳಲ್ಲಿ ಶೇ. 55 ರಷ್ಟು ಜನರು ಅದು ಹೇಗೆ ಬೆಂಬಲಿಸಿದರು ? ಕಮ್ಯುನಿಸ್ಟರ ಕೊಲೆ ರಾಜಕಾರಣವನ್ನು ಕಂಡೂ ಅವರನ್ನೇ ಆಡಳಿತಕ್ಕೆ ಆರಿಸುವಷ್ಟು ಕ್ರೂರಿಗಳೆ ನಮ್ಮ ಜನ? ಅದರಲ್ಲೂ ಸಾಕ್ಷರತೆ ಹೆಚ್ಚಿನ ಪ್ರಮಾಣದಲ್ಲಿರುವ ಪಶ್ಚಿಮ ಬಂಗಾಳದ ಜನ !

ಕಮ್ಯುನಿಸ್ಟರಿಗೆ ಹಿಂಸೆಯಲ್ಲಿ ನಂಬಿಕೆಯೂ ಇಲ್ಲ. ಹಿಂಸೆಯನ್ನು ಕಮ್ಯುನಿಸ್ಟರು ಆರಾಧಿಸುವುದೂ ಇಲ್ಲ. ಅಥವಾ ಶೆಟ್ಟರು ಹೇಳಿರುವಂತೆ ಕಮ್ಯುನಿಸ್ಟರು ಹಿಂಸೆಗೆ ತತ್ತರಿಸುವುದೂ ಇಲ್ಲ.

ಸಮಾಜದಲ್ಲಿನ ಎಲ್ಲ ಹಿಂಸೆಗಳ ಮೂಲವಾದ 'ಪ್ರಭುತ್ವ'ದ ನಾಶಕ್ಕೆ ಹೊರಟಿರು ವವರು ಕಮ್ಯುನಿಸ್ಟರು. 'ಪ್ರಭುತ್ವ ಶಕ್ತಿ'ಯ ವಿರುದ್ಧ ಹೋರಾಡುತ್ತಿರುವ ಕಮ್ಯುನಿಸ್ಟ

ರಿಗೆ 'ಪ್ರಭುತ್ವ' ಉಂಟುಮಾಡಬಹುದಾದ ಹಿಂಸೆಯ ಪ್ರಮಾಣವೂ ಗೊತ್ತು. ಅದನ್ನು ಎದುರಿಸುವ ಬಗೆಯೂ ಗೊತ್ತು. ಆದ್ದರಿಂದ ಹಿಂಸೆಯ ಮೇಲಣ ಉಪಾನ್ಯಾಸ ಶೆಟ್ಟರಿಂದ ಕಮ್ಯುನಿಷ್ಟರಿಗೆ ಅನಗತ್ಯ.

—ಶಂಕರ ಲಾಳಾಪುರ

(ಇದರ ಬಗ್ಗೆ ಚರ್ಚೆ ಇಲ್ಲಿಗೆ ಮುಗಿಸಿದ್ದೇವೆ —ಸಂ:)



## ತಿಂಗಳ ತಿಪ್ಪೆಗುಂಡಿ

ಪ್ರಿಯ ಓದುಗರೆ, ಕಳೆದ ಸಂಚಿಕೆಯಲ್ಲಿ ನಾವು ಶುರುಮಾಡಿದ ತಿಂಗಳ ತಿಪ್ಪೆ ಗುಂಡಿಯನ್ನು ನೀವು ಅಭಿಮಾನದಿಂದ ತೆಗೆದುಕೊಂಡು ಒಳ್ಳೆಯ ಮಾತಾಡಿದ್ದಕ್ಕೆ ನಿಮಗೆ ವಂದನೆಗಳು. ಈ ಸಾರಿ ನಮ್ಮ ಮಾನ್ಯ ಗುಂಡೂರಾವ್‌ರವರು ಅಸ್ವಸ್ಥರಾಗಿದ್ದ ರಿಂದ ತಿಪ್ಪೆಗುಂಡಿಗೆ ಸಾಕಷ್ಟು ಕಸ ಸಿಗಲಿಲ್ಲ. ಆದರೆ ನಮ್ಮ ಪಕ್ಕದ ರಾಜ್ಯದ ಡಾ॥ ಚೆನ್ನಾರೆಡ್ಡಿಯವರನ್ನು ಇಲ್ಲಿಗೆ ಸ್ವಾಗತಿಸುತ್ತಿದ್ದೇವೆ.

ಡಾ॥ ಚೆನ್ನಾರೆಡ್ಡಿಯವರು ಕಳೆದ ತಿಂಗಳು ಶ್ರೀಶೈಲದ ಆ ಮಲ್ಲಿಕಾರ್ಜುನನನ್ನು ಸತತವಾಗಿ ಆರುಗಂಟೆಯ ತನಕ ಆರಾಧಿಸಿದರು. ಆಗ ಇವರ ಆರಾಧನೆಗೆ ಸಿಟ್ಟು ಮಾಡಿಕೊಂಡು ಮಲ್ಲಿಕಾರ್ಜುನನು ಪ್ರತ್ಯಕ್ಷನಾಗುವನು. ಇದಕ್ಕೆ ರೆಡ್ಡಿಯವರು ವಿನೀತ ಭಾವದಿಂದ ಮಲ್ಲಿಕಾರ್ಜುನನ ಕಾಲಿಗೆ ಬೀಳುವರು. ಮಲ್ಲಿಕಾರ್ಜುನನು ಕೋಪದಿಂದ ಪಕ್ಕಕ್ಕೆ ತಳ್ಳುವನು. ರೆಡ್ಡಿಯವರು ಬಾಯಿ ಬಾಯಿಬಡಿದುಕೊಳ್ಳುತ್ತ ಈ ಬಡಪಾಯಿಯ ಮೇಲೆ ಸಿಟ್ಯಾಕೆಂದು ಕೇಳಿದಾಗ : ಸ್ವಾಮಿಯು ನೀನು ನನ್ನನ್ನು ಪೂಜಿಸುವುದು ಒಂದು ನಾಟಕ. ನಿನ್ನ ಹೃದಯದಲ್ಲಿ ಮತ್ತು ಮನಸ್ಸಿನಲ್ಲಿರುವುದು ಇಂದಿರಾಗಾಂಧಿಯೇ ವಿನಹ ನಾನಲ್ಲ ಎನ್ನುವನು. ಆದಕ್ಕೆ ರೆಡ್ಡಿ ಗಾಭರಿಯಿಂದ ಇಲ್ಲ ಸ್ವಾಮಿ ಇಂದಿರಾ ಗಾಂಧಿ ಇರುವುದು ನನ್ನ ಜೇಬಿನಲ್ಲಿ ಮಾತ್ರ ಎಂದು ; ಶ್ರೀಮತಿ ಗಾಂಧಿ ಭಾವಚಿತ್ರ ವಿರುವ ಬ್ಯಾಡ್ಜನ್ನ ತೆಗೆದು ತೋರಿಸುವರು. ಆಗ ಮತ್ತಷ್ಟು ಉಗ್ರಗೊಂಡ ಸ್ವಾಮಿಯು ನನ್ನ ಭಾವಚಿತ್ರವಿರುವ ಬ್ಯಾಡ್ಜನ್ನು ಯಾಕೆ ಹಾಕಿ ಕೊಂಡಿಲ್ಲ? ನಿನ್ನ ಮಂತ್ರಿ ಪದವಿ ಹೋಗಲಿ ಎಂದು ಶಾಪಕೊಡುವನು.

## ಬೀದಿಮಾತು

# ನನ್ನ ಕಾಲದ ಗಂಡೈಸು

ಒಂದು :

ನಮ್ಮ ರಾಜಕೀಯ ಚರಿತ್ರೆಯಲ್ಲಿ ಚಿಕ್ಕಮಗಳೂರಿನ ಲೋಕಸಭೆ ಚುನಾವಣೆಯನ್ನು ಮರೆಯುವಂತಿಲ್ಲ. ಈ ಸಮಯದಲ್ಲಿ ಪ್ರಜ್ಞಾವಂತರ ದುಡಿಮೆಯನು ವಿರೇಂದ್ರ ಪಾಟೀಲರಂಥ ಚಿಲ್ಲರೆ ಜನ ಉಳಿಸಿಕೊಳ್ಳಲಿಲ್ಲ. ಈ ರೀತಿ ನಮಗೆ ಅನ್ನಿಸುವುದು ನಮ್ಮ ಸುತ್ತ ಕಂತ್ರಿ ರಾಜಕಾರಣಿಗಳು ಇರುವುದರಿಂದ.

ಅದೊಂದು ದಿನ ಮಧ್ಯಾಹ್ನ ಚಿಕ್ಕಮಗಳೂರು ಪಟ್ಟಣದಲ್ಲಿ ತಿರುಗುತ್ತಿದೆ. ದಲಿತಸಂಘದ ಸಮಿತಿಯ ಗೆಳೆಯರೆಲ್ಲ ಯಾರಿಗೂ ಓಟುಮಾಡುವುದು ಬೇಡವೆಂಬುದರ ಬಗ್ಗೆ ಒಂದು ಸಭೆಯನ್ನು ಕರೆದಿದ್ದರು. ಆ ಸಭೆಗೆ ಹೊರಟಿದ್ದೆ. ಹಾದಿಯಲ್ಲಿ ಎಸ್. ವೆಂಕಟರಾಂ, ಪ್ರಮೀಳ ಮತ್ತು ಇತರರು ಜೀಪಿನಲ್ಲಿ ಕೂತಿದ್ದರು. ಆಗ ವೆಂಕಟರಾಂರವರು ಪರಿಚಯ ಮಾಡಿಕೊಟ್ಟರು. ಈ ಹೆಂಗಸಿಗೆ ಮಾತನಾಡಲು ಧ್ವನಿಯಿರಲಿಲ್ಲ. ಇಂದಿರಾಗಾಂಧಿಯ ವಿರುದ್ಧ ಕೂಗಾಡಿ ಧ್ವನಿಯನ್ನು ಕಳೆದುಕೊಂಡಿದ್ದಳು. ಈಗ ಕಾಂಗ್ರೆಸ್ಸಿನ ಕಸದ ಬುಟ್ಟಿಯಲ್ಲಿ ಜಾಗಗಿಟ್ಟಿಸಿಕೊಂಡಿದ್ದಾರೆ. ಗಂಟಲು ಸರಿಹೋಗಬಹುದು.

ಮೇಲ್ನೋಟಕ್ಕೆ ಪ್ರಮೀಳರವರು ಒಳ್ಳೆಯ ಶಾಸಕಿ ಎಂದು ಹೆಸರು ಪಡೆದಿದ್ದರು. ಈಕೆಯನ್ನು 'ಫೈರ್‌ಬ್ರ್ಯಾಂಡ್' ಎಂದು ಕರೆಯತೊಡಗಿದರು. ಯಾರಿಗಾದರೂ ತಲೆಯಿಲ್ಲದಾಗ ತಾವು ಫೈರ್ ಬ್ರ್ಯಾಂಡ್ ಆಗ್ತೀವಿ ಎಂದು ಹೊರಟರೆ ಅದಕ್ಕಿಂತ ದಡ್ಡತನವಿಲ್ಲ. ಇಂಥ ದಡ್ಡತನವನ್ನು ಕಳೆದ ತಿಂಗಳು ಬೆಂಗಳೂರಿನ ಒಂದು ಕಾರ್ಯಕ್ರಮದಲ್ಲಿ ತೋರಿಸಿಕೊಂಡರು. ಇಷ್ಟೊತ್ತಿಗೆ ಪತ್ರಿಕೆಗಳಲ್ಲಿ ಪ್ರಮೀಳ (ಹೆಸರು ಚೆನ್ನಾಗಿದೆ)ರವರು ಕಾಂಗ್ರೆ ಸೇರುವುದರ ಬಗ್ಗೆ ಪತ್ರಿಕೆಗಳಲ್ಲಿ ವರದಿ ಬಂದಿತ್ತು. (ನಾನು ಕಾರ್ಯಕ್ರಮ ಪ್ರಾರಂಭವಾಗುವುದಕ್ಕೆ ಮುನ್ನ "ಶೂದ್ರಕ್ಕೆ ಚಂದಾದಾರರಾಗಿ" ಅಂದೆ. "ಅಯ್ಯೋ ನನ್ನ ಕೋಟು ಬಿಟ್ಟು ಬಂದಿದ್ದೇನೆ" ಅಂದರು. ನಾನು ನಗುತ್ತ "ನಿಮ್ಮ ಮೈಮೇಲಿರುವ ಒಡವೆಕೊಟ್ಟರೆ ಹದಿನೈದು ವರ್ಷ ಶೂದ್ರ ತರುತ್ತೇನೆ" ಅಂದೆ. ಅದಕ್ಕೆ ಆಕೆ ನಗುನಗುತ್ತ ಸ್ವೀಕರಿಸುವಷ್ಟು ಧೈರ್ಯವಿರಲಿಲ್ಲ.) ಆದ್ದರಿಂದ ಅಂದಿನ ಕಾರ್ಯಕ್ರಮದಲ್ಲಿ ಸಭಿಕರು ಒಂದೇ ಸಮನೆ ಕೂಗುತ್ತಿದ್ದರೂ; ನಾನು ನಿಮಗಿಂತ ಗಟ್ಟಿಯಾಗಿದ್ದೇನೆ,

ಎಂದು ಕೂಗುತ್ತಿದ್ದರು. ಆದರೆ ಕೊನೆಗೆ ಸಭಿಕರನ್ನು ಕುರಿತು: ನಾನು ನಿಮಗೆ ಭಯಪಡುವುದಿಲ್ಲ. ನಾನು ಸಮಜಾಯಿಷಿ ಕೊಡುತ್ತೇನೆ ಎಂದು ಈ ಗಂಡ್ಸಂಗಸು ತುಂಬ ಧೈರ್ಯದಿಂದ "ನನ್ನ ಕ್ಷೇತ್ರದ ಜನಂಗೆ ರಕ್ಷಣೆ ಬೇಕಾಗಿದೆ. ಇದ್ದ ಕಾರ್ಯಕರ್ತರೆಲ್ಲ ಬಿ. ಜೆ. ಪಿ ಗೆ ಹೋಗಿದ್ದಾರೆ. ಈಗ ನಾವು ಉಳಿದಿರುವುದು ಮೂರು ನಾಲ್ಕು ಮಂದಿ. ರಮಜಾನ್ ಹತ್ತಿರ ಬರುತ್ತಿದೆ. ನನ್ನ ಕ್ಷೇತ್ರದ ಜನಕ್ಕೆ ರಕ್ಷಣೆ ಬೇಕಾಗಿದೆ. ಆದ್ದರಿಂದ ಕಾಂಗ್ರೆ ಸೇರುತ್ತಿದ್ದೇನೆ" ಅಂದರು. ಆದ್ದರಿಂದ ಇನ್ನೂ ಮುಂದೆ ರಕ್ಷಣೆಗೆ ಕಾಂಗ್ರೆ ಸೇರಿ ನಮ್ಮ ಭಯಂಕರ ಶಾಸಕಿ ಪ್ರಮೀಳರವರ, ಗಂಡು ಹೃದಯವನ್ನು ಬೆಳೆಸಬೇಕು. ಹಾಗೆಯೇ ಈಕೆಯನ್ನು 'ಗಂಡಸರ ಕ್ಷೇಮಾಭಿವೃದ್ಧಿ' ಸಚಿವೆಯನ್ನಾಗಿ ಮಾಡಲು ಸಹಕರಿಸಬೇಕು.

## ಎರಡು : ಬಿ.ವಿ. ಕಾರಂತರಿಗೊಂದು ಪ್ರೇಮಪತ್ರ

ಕಳೆದ ತಿಂಗಳು ಒಂದು ಸಂಜೆ ನಾನು ಮತ್ತು ಕೆಲವು ಗೆಳೆಯರು (ಇವರಲ್ಲಿ ಗೆಳತಿಯರೂ ಇದ್ದರು.) ಶ್ಯಾಮಪ್ರಕಾಶದಲ್ಲಿ ಕಾಫೀ ಕುಡಿಯಲು ಹೋದೆವು. ಅದೇ ಸಮಯಕ್ಕೆ ಅಲ್ಲಿಗೆ ಹೆಬ್ಬಾರರು ಮತ್ತು ಗೆಳೆಯ ಮರಿಶಾಮ ಚಾರ್ ಬಂದರು. ಹೆಬ್ಬಾರರ ಜೊತೆಯಲ್ಲಿ ಮಾತಾಡುವಾಗ ಅವರು "ನೋಡಿ ನಮ್ಮ ಸರ್ಕಾರ ಯಾವುದೇ ಕಾರ್ಯಕ್ರಮದ ಬಗ್ಗೆ ಒಂದು ಬ್ಲೂಪ್ರಿಂಟನ್ನ ಇಟ್ಟುಕೊಳ್ಳುವುದಿಲ್ಲ. ನಾವು ಬಂದು ಹೋಗುವುದಕ್ಕೆ ಮತ್ತು ಇಲ್ಲಿ ಉಳಿದುಕೊಳ್ಳುವುದಕ್ಕೆ ಎಷ್ಟೊಂದು ಖರ್ಚಾಗುತ್ತೆ" ಅಂದರು. ನನಗೆ ಒಂದು ರೀತಿಯಲ್ಲಿ ಹೆಬ್ಬಾರರ ಸರಳತನದ ಬಗ್ಗೆ ಮೆಚ್ಚಿಗೆಯಾಯಿತು.

ಕರ್ನಾಟಕದಲ್ಲಿ ನಾಟಕಕಾರರಿಗೆ ಮತ್ತು ರಂಗಭೂಮಿಗೆ ಸಂಬಂಧಿಸಿದಂತೆ ದುಡಿಯುವವರಿಗೆ ಕೊರತೆಯಿಲ್ಲ. ಇದೇ ದುಡಿಮೆಯ ಹಾದಿಯಲ್ಲಿ ಬಿ. ವಿ. ಕಾರಂತರ ಪಾಲೂ ಇದೆ. ಇದರ ಬಗ್ಗೆ ಯಾರದೂ ತಕರಾರಿಲ್ಲ. ಆದರೆ ಇವರುದೆ ಹಳೆಯ ದಿಬ್ಬದ ಮೇಲೆ ಕೂತು ಈ ಕಡೆ ಮನಸ್ಸು ಬಂದಾಗ ಮಾತ್ರ ಪಿಳ ಪಿಳ ಕಣ್ಣು ಬಿಡುವುದು ಅಸಹ್ಯವಾದದ್ದು. ನಾನು ತಮಾಷೆಗೆ ಅಥವಾ ಗಂಭೀರವಾಗಿ ಬಹಳಷ್ಟು ನಾಟಕ ಅಕಾಡೆಮಿಯ ಸದಸ್ಯರನ್ನ ಕೇಳಿದ್ದೇನೆ : ದೆಹಲಿಯಲ್ಲಿ ಕೂಡಿರುವ ಈ ಯಜಮಾನಗಿಂತ ಇಲ್ಲಿ ಯಾರೂ ಇಲ್ಲವಾ ? ನೀವು ಯಾಕೆ ಪ್ರತಿಭಟಿಸುವುದಿಲ್ಲ ? ಪ್ರತಿಭಟಿಸಿದರೆ ನಿಮ ಸದಸ್ಯತ್ವ ಹೋಗುತ್ತದಾ ? ಎಂದು. ಇದಕ್ಕೆ ಸಂಬಂಧಿಸಿದಂತೆ ಬಹಳಷ್ಟು ಜನ ಸದಸ್ಯರು ಹೌದು ಯಾಕೆ ಕಾರಂತರಾಗಬೇಕು ? ಅನ್ನುವರು. ಮತ್ತೆ ಸ್ವಲ್ಪ ಸಮಯದ ನಂತರ "ಏನೋ ರಾಜಕೀಯ, ಹಾಳಾಗಿ ಹೋಗಲಿ ಇವರಿಂದ ಎಷ್ಟೋ ಸಾರಿ ಸಭೆಯನ್ನ ಮುಂದೂಡಲಾಗಿದೆ" ಅನ್ನುವರು.

ಈ ಮೇಲಿನ ಮಾತುಗಳನ್ನು ದೃಷ್ಟಿಯಲ್ಲಿಟ್ಟುಕೊಂಡು ಈ ಪ್ರೇಮ ಪತ್ರವನ್ನು ಬರೆಯುತ್ತಿದ್ದೇನೆ. ಬೇಕಾದರೆ ಇದನ್ನು ಪ್ರೀತಿಯ ಪತ್ರವೆಂದು ಓದಿಕೊಳ್ಳಿ.

ಯಾಕೆಂದರೆ ಪ್ರೀತಿ–ಪ್ರೇಮ ಇವೆರಡೂ ತುಂಬ ಹತ್ತಿರದ ಶಬ್ದಗಳಾದ್ದರಿಂದ ಬಳಸುತ್ತಿದ್ದೇನೆ. ಹಾಗೆಯೇ ಕಾರಂತರ ಪ್ರೇಮಾರವರು ಬೆಂಗಳೂರಿನಲ್ಲಿರುವುದರಿಂದ ಅವರ ಪ್ರೇಮಪತ್ರಕ್ಕೂ ಈ ಪ್ರೇಮ ಪತ್ರಕ್ಕೂ ಯಾವ ಸಂಬಂಧವಿರಲಾರದು. ಆದ್ದರಿಂದ ಕಾರಂತರೇ ಇಲ್ಲಿ ಬೇಕಾದಷ್ಟು ಮಂದಿ ಇದ್ದಾರೆ ನಿಮ್ಮ ಜಾಗವನ್ನು ತುಂಬಲು. ನೀವೇ ಪ್ರೀತಿಯಿಂದ ಶ್ರೀರಂಗರಿಗಾಗಲಿ, ಲಂಕೇಶರವರಿಗಾಗಲಿ, ಕಂಬಾರರವರಿಗಾಗಲಿ, ಶ್ರೀನಿವಾಸತಾಪರೆಗೆರೆ ಅವರಿಗಾಗಲಿ ಅಥವಾ ಜಿ. ಬಿ. ಜೋಶಿಯವರಿಗಾಗಲಿ ಯಾಕೆ ಬಿಟ್ಟು ಕೊಡಬಾರದು ? ಇದನ್ನ ನಾನೊಬ್ಬ ಶೂದ್ರ ಬರೆಯುತ್ತಿರುವುದರಿಂದ ಬೇರೆ ಬಣ್ಣವನ್ನು ಹಚ್ಚಬೇಡಿ.

## ಮೂರು: 'ಮಾತು ಮೌನದ ಮೊಗ್ಗೆಯನೊಡೆದು' ಬಂದ ಕವಿ

ಆಗಸ್ಟ್ 17ರಂದು ಬೆಳಿಗ್ಗೆ ಶ್ರೀ ಚೆನ್ನವೀರಕಣವಿಯವರಿಗೆ ಕಾವ್ಯ ಪ್ರೇಮಿಗಳು ಅಭಿನಂದನಾ ಕಾರ್ಯಕ್ರಮವನ್ನಿಟ್ಟುಕೊಂಡಿದ್ದರು. ಇವರಿಗೆ ಯಾವ ರೀತಿಯ ಜಾತಿಯ ಉದ್ದೇಶವೂ ಇರಲಿಲ್ಲವೆಂದು ಪ್ರೀತಿಯಿಂದ ಹೇಳಬಯಸುವೆ. ಕಣವಿಯವರು ಬೇರೆ ರಾಜಕೀಯವನ್ನು ಮಾಡಿಕೊಂಡು ಕವಿಗಳಾದವರಲ್ಲ- "ಮಾತು ಮೌನದ ಮೊಗ್ಗೆಯನೊಡೆದು" ಎಂಬ ಅವರ ಕವನದ ಸಾಲಿನಂತೆ ಕಾವ್ಯಕೃಷಿಯಲ್ಲಿ ತೊಡಗಿದವರು. ನಮ್ಮ ಕಾಲದ ಕೆಲವೇ ಉತ್ತಮ ಕವಿಗಳಲ್ಲೊಬ್ಬರು.

ಬೆಂಗಳೂರಿನ ಸಾಹಿತ್ಯಪ್ರಿಯರಿಗೆ ಅಪರೂಪದ ಕಾರ್ಯಕ್ರಮವಾಗಿತ್ತು. ನಾನು ಒಂದು ಮೂಲೆಯಲ್ಲಿ ಕೂತು ಆನಂದಿಸುವ ಮನಸ್ಸಿತ್ತು. ಆದರೆ ಹೋದ ತಕ್ಷಣ ಗೆಳೆಯ ಡಿ. ಆರ್. ನಾಗರಾಜ ವಂದನಾರ್ಪಣೆಗೆ ಗಂಟಾಕಿದ. ಈ ಕೆಲಸವನ್ನು ಸುಮತೀಂದ್ರ ನಾಡಿಗ್‌ರವರು ಮಾಡಬೇಕಿತ್ತು. ಆದರೆ ಲಂಕೇಶರವರು ಅಧ್ಯಕ್ಷರಾಗಿದ್ದುದರಿಂದ ವಂದನಾರ್ಪಣೆಯನ್ನು ಮಾಡುವುದಿಲ್ಲವೆಂದರಂತೆ. ನಂತರ ಶ್ರೀಕಣವಿಯವರಿಗೆ ಕಾಣಿಕೆಯನ್ನು ಸಲ್ಲಿಸುವ 'ಪೋರ್ಟ್‌ಫೋಲಿಯೊ' ಸಿಕ್ಕಿತು. ಇದರಿಂದ ನಾಡಿಗರು ಕಣವಿಯವರನ್ನು ತುಂಬಾ ಆಕರ್ಷಕವಾಗಿ ಆಲಂಗಿಸಿ ತಮ್ಮ ಅಭಿಮಾನವನ್ನು ತೋರಿಸಿದರು.

ಸಿದ್ಧಯ್ಯ ಪುರಾಣಿಕರ ಅಭಿನಂದನೆಯ ನಂತರ ಡಿ ಆರ್. ನಾಗಾರಾಜ್ ಕಲಾವಿದರ ಕಾವ್ಯದ ಬಗ್ಗೆ ಮಾತನಾಡುತ್ತ : ನವೋದಯ, ಸಮನ್ವಯ, ಮತ್ತು ನವ್ಯ ಕಾವ್ಯದ ಬಗ್ಗೆ ಚರ್ಚಿಸುತ್ತ ಕಣವಿ ಮತ್ತು ಶಿವರುದ್ರಪ್ಪರವನ್ನು ಯಾಕೆ ಸಮನ್ವಯ ಕವಿಗಳೆಂದು ಕರೆದರೆನ್ನುವ ಜೊತೆಗೆ; ತಮ್ಮ ಆದರ್ಶ ಮತ್ತು ಆಶಾವಾದದ ನಡುವೆ ಜೀವನ ಶ್ರದ್ಧೆಯನ್ನು ಕಳೆದುಕೊಳ್ಳದ ಕವಿ ಎಂದರು. ಇವರ ಮೂಲಕ ಬಂದ ಅವರ ಭಾವಗೀತಾತ್ಮಕತೆ ಭೋಳ ಆಶಾವಾದದಿಂದ ಕೂಡಿದ್ದುದಲ್ಲವೆಂದರು. ಹಾಗೇಯೇ ಸಂಪ್ರದಾಯ ಕವಿಗಳಿಗೆ ಯಾಕೆ Aggressive-

ness ಸಾಧ್ಯವಿಲ್ಲ. ಆದರೆ ಇದು ಯಾಕೆ Radical ಕವಿಗಳಿಗೆ ಸಾಧ್ಯವಿದೆ ಎಂಬುದವನ್ನು ಸೂಕ್ಷ್ಮವಾಗಿ ವಿವರಿಸಿದರು. ಮತ್ತು ಕಣವಿಯವರಂಥ ಉದಾರ ವಾದಿ ಕವಿಗಳ ಕಾವ್ಯ ಸಮಾನ್ಯವಾಗಿ ಮುಕ್ತವಾಗಿರುತ್ತೆ, ಪೂರ್ತಿ ಸಂಕೀರ್ಣವಲ್ಲ, ಆದರೆ ಸರಳವಲ್ಲ ಎಂದರು. ನಂತರ ಹೆಚ್. ಎಸ್. ರಾಘವೇಂದ್ರರಾವ್‌ರವರು ಕಣ ವಿಯವರ ಗದ್ಯವನ್ನು ಕುರಿತು ಮಾತಾಡುತ್ತ ಕಣವಿಯವರು ಲಲಿತ ಪ್ರಬಂಧ ಗಳನ್ನು ಬರೆಯುವಲ್ಲಿ ತೊಡಗಲಿ ಎಂದರು.

ತಮ್ಮ ಅಭಿನಂದನೆಗೆ ಉತ್ತರ ಕೊಡುತ್ತ ಕಣವಿಯವರು ತಮ್ಮ ಚಿಕ್ಕಂದಿನ ಹಳ್ಳಿಯ ಅನುಭವಗಳನ್ನು ಸ್ವಾರಸ್ಯವಾಗಿ ವಿವರಸಿದರು. ಹಾಗೆಯೇ village returned ಎಂಬುದಕ್ಕೆ ಹೊಸ ಅರ್ಥವನ್ನು ಕೊಡುವುದರ ಮೂಲಕ ಹೇಗೆ ಹಳ್ಳಿಯ ಅನುಭವಗಳನ್ನು ಗಂಭಿರವಾಗಿ ಸಾಹಿತ್ಯದಲ್ಲಿ ತರಲು ಸಾಧ್ಯವಿದೆಯೆಂದರು. ಕೊನೆಗೆ ಒಂದಷ್ಟು ಕವನಗಳ ವಾಚನದಿಂದ ಸಭೆಗೆ ಮತ್ತಷ್ಟು ಕಳೆಯನ್ನು ತಂದರು.

ಅಧ್ಯಕ್ಷತೆ ವಹಿಸಿದ್ದ ಲಂಕೇಶರು ತಮ್ಮ ಅಭಿನಂದನಾ ಸಮಾರಂಭಗಳು ಕೃತಕ ಮಾಡುತ್ತವೆ. ಕಣವಿಯವರ ಕಾರ್‍ಯದ ಒಂದು ಘಟ್ಟ ಮುಗಿದಿದೆ. ಈಗ ಎರಡನೆಯ ಘಟ್ಟದಲ್ಲಿ ನಿಂತು ಹೊಸದಾಗಿ ತೊಡಗುತ್ತಿದ್ದೇವೆ ಎಂಬ ಹುಮ್ಮಸ್ಸಿ ನಿಂದ ಬದುಕ ಬೇಕಾಗಿದೆ. ಕಣವಿಯವರು ಈಗಲೇ ಎಷ್ಟು ' ಚೆನ್ನಾಗಿದ್ದಾರೆ. ಇನ್ನು ಯುವಕರಾಗಿದ್ದಾಗ ಇವರಿಗಾಗಿ ಎಷ್ಟೊಂದು ಮಂದಿ ಹುಡುಗಿಯರು ಪರ ದಾಡಿರಬಾರದು. ಅದರಲ್ಲೂ ಪದ್ಯ ಬರೆಯುವ ಹಡುಗರನ್ನು ಕಂಡರೆ ಹುಡುಗಿಯರಿಗೆ ಇಷ್ಟ. —ನಾವು ಹುಡುಗಿಯರಾಗಿದ್ದರೆ ಮದುವೆಯಾಗುತ್ತಿದ್ದೆವು ಎಂದು ಸ್ವಾರಸ್ಯವಾಗಿ ವಿವರಿಸಿದರು. ಇದರ ನಡುವೆ ಕ್ರಾಂತಿಕಾರಿಗಳು - ಮತ್ತು ಅವರ ಡಾಲರ್ ರುಚಿ ಯನ್ನು ಸಿಟ್ಟಿನಿಂದ ವಿವರಿಸಿದರು. ನಂತರ ನಮ್ಮ ಕ್ರೂರ ರಾಜಕೀಯ ಸಂದರ್ಭ ದಲ್ಲಿ ಕೆ. ಎಸ್. ನರವರ ಮಾನಸಿಕ ಅಸ್ತವ್ಯಸ್ಥೆಯನ್ನು ಕಂಡುಕೊಳ್ಳಬೇಕು ' ಎಂದರು. ಹಾಗೆಯೇ ಬಿ. ಪುಟ್ಟಸ್ವಾಮಯ್ಯನವರ ಕಾರ್‍ಯಶ್ರದ್ಧೆಯ ಬಗ್ಗೆ ವಿವರಿಸುತ್ತ ಇವರು ನನಗೆ ಪರಿಚಯವಾದದ್ದು ಕುದುರೆಯ ಜೂಜಿನಲ್ಲಿ ಎಂದಾಗ; ಪುಟ್ಟಸ್ವಾಮಯ್ಯ ನವರಿಗೆ ಮುಜಗರವಾದಂತೆ ಕಾಣಿಸಿತು. ಯಾಕೆಂದರೆ ಅವರ ಜೀವನ ಕ್ರಮವೇ ಬೇರೆ ರೀತಿಯದಲ್ಲವಾ ?

# ಕೆಲವು ಗೊಂದಲಗಳ ನಡುವೆ ನಮ್ಮ ಆದರ್ಶ

—ವೆಂಕಟಲಕ್ಷ್ಮಿ ಬಿ. ಎಸ್.

ಒಂದು ಅನುಭವ

ಮರೆಯಲು ಪ್ರಯತ್ನಿಸಿದಷ್ಟೂ ಮರುಕಳಿಸುವ ನೆನಪುಗಳು ಹಲವಾರುಂಟು. ಅಂಥವುಗಳಲ್ಲಿ ಒಂದು ಮದುವೆಯಾದ ಹೊಸತರಲ್ಲೆ ನಾನು ಅನುಭವಿಸಿಬೇಕಾಗಿ ಬಂದಿದ್ದ ಹಳ್ಳಿಯೊಂದರಲ್ಲಿನ ಜೀವನ.

ಕಲಿತವರು ಹಳ್ಳಿಗಳಲ್ಲಿ ನೆಲೆಸಬೇಕು; ನಾಗರಿಕತೆ ಕಾಣದ ಈ ಸ್ಥಳಗಳಲ್ಲಿ ಇದ್ದು ಗ್ರಾಮ ಬದುಕನ್ನು ಪುನರುತ್ಥಾನಗೊಳಿಸಬೇಕು ಎಂಬ ದೊಡ್ಡ ಮಾತುಗಳನ್ನು ಕೇಳಿದಾಗಲೆಲ್ಲ ನನ್ನ ಮನಸ್ಸು ವ್ಯಂಗ್ಯವಾಗಿ ನಗುತ್ತದೆ - ಹಳ್ಳಿಯಲ್ಲಿನ ಕೆಲವೇ ತಿಂಗಳುಗಳ ನನ್ನ ಬದುಕನ್ನು ಮತ್ತೆ ನನ್ನ ಮುಂದೆ ಬಿಚ್ಚಿ ಹರವಿ ಮೈಜುಂಗುಟ್ಟಿಸುತ್ತದೆ.

ನಾನು ಹಳ್ಳಿಯ ಬದುಕನ್ನು ಹಳಿಯುತ್ತಿಲ್ಲ. ಆದರೆ ತನ್ನವರೆಲ್ಲರೂ ತನ್ನ ಸಮೀಪದಲ್ಲೆ ಇರಬೇಕು ಎಂದು ಸ್ವಾರ್ಥಿಯಾಗಿ, ಹಳೆಯ ಸಂಬಂಧಗಳನ್ನು ಬಿಡಲಾರದಷ್ಟು ಭಾವುಕಳಾಗಿ ನಾಗರಿಕತೆಯನ್ನು ಸ್ವಲ್ಪವಾದರೂ ಬಯಸುವ, ಯಾವುದೇ ನಿರ್ದಿಷ್ಟ - ಆದರ್ಶವಿಲ್ಲದ ಸಾಮಾನ್ಯ - ಹೆಣ್ಣೊಬ್ಬಳ ಮೇಲೆ ಒಮ್ಮೆಲೇ ಪರಕೀಯ ವಾತಾವರಣ ಹೇರಲ್ಪಟ್ಟಾಗ ಅವಳು ಮಾನಸಿಕವಾಗಿ ಎಂಥ ಜಂಜಾಟಕ್ಕೆ ಸಿಕ್ಕಿಕೊಳ್ಳುತ್ತಾಳೆ ಎಂದು ತಿಳಿಸುವ ಆತುರ ನನಗಿದೆ.

ಬೆಂಗಳೂರನ್ನು ಬಿಟ್ಟು ಎಂದೂ ಹೊರಗೆ ಹೋಗಿರದೆ ನನಗೆ ಹಲವಾರು ರೀತಿಯಲ್ಲಿ ಪ್ರಿಯರೆನಿಸಿದ್ದವರಿಂದ ಮೊದಲ ಬಾರಿಗೆ ದೂರಾಗಿ ನಾನಿಲ್ಲಿಂದ ಅನಿವಾರ್ಯವಾಗಿ ತೆರಳಲೇಬೇಕಾದಾಗ, ವೈವಾಹಿಕ ಜೀವನದ ಮೊದಲ ಘಟ್ಟವೇ ನನಗೆ ನೋವಿನ ಸಂಗತಿ ಎನ್ನಿಸಿದ್ದಂತೂ ನಿಜ. ನನ್ನ ಗಂಡ ನನ್ನನ್ನು ವಿಶ್ವಾಸದಿಂದ ಗೌರವದಿಂದ

ಕಾಣಬಲ್ಲ ಎಂಬ ನಂಬಿಕೆ ನನಗೆ ಧೃಢವಾಗಿದ್ದರೂ ಹಳ್ಳಿಯ ಬಸ್ಸೊಂದರಲ್ಲಿ ನನಗೆ ಒಗ್ಗಿದ್ದ ಸ್ಥಳಗಳನ್ನೆಲ್ಲ ಹಿಂದಾಗಿಸಿ ಪ್ರಯಾಣ ಮಾಡುವಾಗ ನನ್ನ ಮನಸ್ಸನ್ನು ಆವರಿಸಿದ್ದ ಭಯ ಇಂದಿಗೂ ನನ್ನ ಬಗ್ಗೆ ನನಗೇ ಅನುಕಂಪ ಮೂಡಿಸುತ್ತದೆ.

ಗಂಡ ವಾಸವಾಗಿದ್ದ ಸ್ಥಳ ಕುಗ್ರಾಮವೊಂದರಲ್ಲಿ ಹುದುಗಿಕೊಂಡಿದ್ದ ಪುಟ್ಟದೊಂದು ಸಕ್ಕರೆ ಕಾರ್ಖಾನೆ ಕಾಲೊನಿ. ಅಲ್ಲಿದ್ದುದು ಒಟ್ಟು ಹತ್ತು ಹನ್ನೆರಡು ಕುಟುಂಬಗಳು. ಕಣ್ಣಿಗೆ ಕಾಣಿಸುವಷ್ಟು ದೂರದಲ್ಲೆಲ್ಲೊ ಕಾರ್ಖಾನೆ. ಹಲವಾರು ಫರ್ಲಾಂಗುಗಳ ಅಂತರದಲ್ಲಿ ಅಲ್ಲೊಂದು ಇಲ್ಲೊಂದು ಮನೆ. ಮನೆಗೆ ಆತುಕೊಂಡಂತೆಯೇ ಇದ್ದ ಚರಂಡಿಯಲ್ಲಿ ಇಡೀ ವಾತಾವರಣವನ್ನೇ ಗಬ್ಬೆಬ್ಬಿಸಿದ್ದ ಮೊಲ್ಯಾಸಸ್ ನೀರಿನ ಭೋರ್ಗರೆತ. ವಾಹನ ಸಂಚಾರಕ್ಕೆ ಎಡೆಗೊಡದಂತಹ ಕಾಲುದಾರಿಗಳು. ಅಲ್ಲಲ್ಲಿ ಎದ್ದುನಿಂತ ದಿಣ್ಣೆಗಳು. ದೀಪ ಕಾಣದ ಅಡ್ಡಾದಿಡ್ಡಿ ರಸ್ತೆಗಳು. ಕಾಲೊನಿಯನ್ನು ದಾಟಿ ಬಹುದೂರ ಸಾಗುವವರೆಗೂ ಯಾವ ಬಗೆಯ ವಾಹನವೂ ಕಣ್ಣಿಗೆ ಬೀಳುತ್ತಿರಲಿಲ್ಲ. ಟೆಂಟ್ ಸಿನೆಮಾ ಹಲವಾರು ಗಂಟೆಗಳ ಪ್ರಯಾಣದ ನಂತರ ತಲಪಬಹುದಾದ ಸ್ಥಳವಾಗಿತ್ತು. ಬೆಂಗಳೂರಿನಿಂದ ಬರೆದ ಕಾಗದ ಕಾಲೊನಿಗೆ ತಲುಪಲು ಏಳು ದಿನಗಳು ಹಿಡಿಯುತ್ತಿತ್ತು. ಟೆಲಿಫೋನ್ ಲೈನ್ ಸಿಗುವುದಂತೂ ಕನಸಿನ ಮಾತಾಗಿ ಅರ್ಧರಾತ್ರಿ ಸಮಯದಲ್ಲಿ ಕಿವಿಗೊಟ್ಟು ಆಲಿಸಿದರೆ ಕೇಳಿಸುತ್ತಿದ್ದ ಕೆಲವು ರೇಡಿಯೋ ಸ್ಟೇಷನ್‌ಗಳನ್ನು ಬಿಟ್ಟರೆ ಜನಪ್ರಿಯ ಕಾರ್ಯಕ್ರಮಗಳನ್ನು ಕೇಳುವುದು ಬರೀ ಆಸೆಯೇ ಆಗಿ ಉಳಿದಿತ್ತು. ಹುಟ್ಟಿನಿಂದಲೇ ನನಗೆ ಅಂಟಿದ್ದ ಅಂತರ್ಮುಖಿ ಸ್ವಭಾವದಿಂದಾಗಿಯೋ ಏನೋ ನಾನು ಅಲ್ಲಿಯ ಜನರ ಸ್ನೇಹದಿಂದ ದೂರವೇ ಉಳಿದಿದ್ದೆ.

ಬೆಂಗಳೂರಿನಲ್ಲಿ ನನಗಿದ್ದ ಉದ್ಯೋಗವನ್ನು ಮುಂದುವರಿಸುವ ಬಗ್ಗೆ ಅನಿಶ್ಚಿತೆಯಿಂದಾಗಿ ಸುದೀರ್ಘ ರಜೆಯಲ್ಲಿ ಅಲ್ಲಿ ನೆಲೆಸಿದ್ದ ನಾನು ಗಂಡ ಫ್ಯಾಕ್ಟರಿಗೆ ಹೋದೊಡನೆ ಉಸಿರು ಕಟ್ಟಿಕೊಂಡು ಒಂದೆರಡು ಗಂಟೆಗಳಲ್ಲಿ ಅಡಿಗೆ ಮುಗಿಸಿ ಅಡಿಗೆ ಮನೆಯಿಂದ ಹೊರಗೋಡಿ ಬರುತ್ತಿದ್ದೆ. ಬಿಸಿಲಿನ ತಾಪ, ಹಾಟ್‌ಪ್ಲೇಟ್‌ನ ಶಾಖ ಇವು ಮಾತ್ರ ನನ್ನ ಮೈ ಬೆವರಿಳಿಸುತ್ತಿರಲಿಲ್ಲ. ಅಕ್ಕಿ, ಸಕ್ಕರೆ ಡಬ್ಬಿಗಳನ್ನು ತಡಕಾಡುವಾಗ ಮರದ ಶೆಲ್ಫುಗಳ ಸಂದಿಯಿಂದ ಇಣುಕುತ್ತಿದ್ದ ದಪ್ಪನೆ ಚೇಳುಗಳು, ಮುಂಡರಗಪ್ಪೆಗಳು ನನ್ನನ್ನು ನಿಶ್ಚೇತಗೊಳಿಸುತ್ತಿದ್ದವು.

ಅನೇಕ ವರ್ಷ ಕಚೇರಿಯೊಂದರಲ್ಲಿ ದುಡಿಯುತ್ತ ಅವಿವಾಹಿತಳಾಗಿಯೇ ಉಳಿದಿದ್ದ ನನ್ನನ್ನು ಜನ ಕೆಲವೊಮ್ಮೆ ತೀಕ್ಷ್ಣವಾಗಿ ಹಲವೊಮ್ಮೆ ಅಸಡ್ಡೆಯಿಂದ ನೋಡಿ

ದಾಗಲಿಲ್ಲಾ ನನಗನ್ನಿಸಿತ್ತು-ಇವರೆಲ್ಲರಿಂದ ಮರೆಯಾಗಿ ಕಣ್ಣಿಗೆ ಕಾಣದ ಸ್ಥಳದಲ್ಲೆಲ್ಲೋ ನೆಲೆಸಿಬಿಡಬೇಕು ಎಂದು. ಮತ್ತೆ ಕೆಲಸಕ್ಕೆ ಬರುವುದಿಲ್ಲ, ಪುಸ್ತಕಗಳನ್ನು ಓದಿ ಕೊಂಡು ನಿಶ್ಚಿಂತೆಯಿಂದ ಅಲ್ಲಿದ್ದು ಬಿಡುತ್ತೇನೆ ಎಂದುಕೊಂಡಿದ್ದ ನನ್ನೊಡನೆ ಹಲ ವಾರು ಚೀಲಗಳಲ್ಲಿ ಪ್ರಯಾಣ ಬೆಳೆಸಿದ್ದ ಪುಸ್ತಕಗಳನ್ನು ನಾನಲ್ಲಿ ತೆರೆದೂ ನೋಡ ಲಿಲ್ಲ. ನಾನು ಆ ಮನೆಗೆ ಕಾಲಿರಿಸಿದ ಹೊಸತರಲ್ಲೆ ನನಗೆ ದರ್ಶನ ಕೊಟ್ಟಿದ್ದ ನಾಗರಹಾವು, ಹೊರಗಿನ ಬಿಸಿಲಿನ ಝಳ ತಾಳಲಾರದೆ ಬಾಗಿಲ ಸಂದಿಯಿಂದ ತಂಪಾದ ಗಾರೆ ನೆಲದತ್ತ ನುಸುಳುವ ಅತುರವನ್ನು ಒಂದೆರಡು ಬಾರಿ ತೋರಿದ್ದ ಅದರ ಮರಿಗಳು ನನ್ನ ಏಕಾಗ್ರತೆಯನ್ನು ನಿರ್ನಾಮಗೊಳಿಸಿದ್ದವು.

ಭಯ ಉತ್ಪಾದಿಸುವ ಇಂತಹ ವಾತಾವರಣದಲ್ಲಿ ಬಸವಳಿದು ಏಕಾಕಿತನದ ತೀವ್ರತೆಯಲ್ಲಿ ಬಳಲುತ್ತ ಕಣ್ಣಿಗೆ ಕಾಣಿಸುವಷ್ಟು ದೂರಕ್ಕೂ ಹಬ್ಬಿದ್ದ ಬಟ್ಟ ಬಯಲನ್ನು ದಿಟ್ಟಿಸಿ ನೋಡುತ್ತ ಕೂತಾಗಲೆಲ್ಲ ನನಗೆ ನನ್ನ ಬದುಕೇ ಬರಡಾಗು ತ್ತಿದೆಯೇನೋ ಎನ್ನಿಸುತ್ತಿತ್ತು. ಕಣ್ಣಿಗೆ ತಂಪೆನಿಸುವ ಹಸುರಿನ ಅಂಗೈಯಗಲ ಭೂಮಿಯೂ ಕಾಣದಿದ್ದಾಗ ನನಗೆ ನನ್ನ ಬದುಕೇ ಒಣಗಿ ಹೋಗುತ್ತಿರುವ ಅನುಭವವಾಗುತ್ತಿತ್ತು. ವಿವಾಹಕ್ಕೆ ಮುಂಚೆ ಯಾರೊಬ್ಬರ ಆಶ್ರಯಕ್ಕೂ ತೀವ್ರ ವಾಗಿ ಬಯಸದಿದ್ದ ನಾನು ಮೊದಲ ಬಾರಿಗೆ ನನಗಿಂತಲೂ ಗಂಡಸು ಧೈರ್ಯಶಾಲಿ ಎಂಬಂಶವನ್ನು ಕಂಡುಕೊಂಡಿದ್ದೆ; ಗಂಡ ಮನೆಗೆ ಬಂದ ತಕ್ಷಣ ಸಿಕ್ಕಿಕೊಂಡಿದ್ದ ಉಸಿರನ್ನು ನಿರಾಳವಾಗಿಸಿಕೊಳ್ಳುತ್ತಿದ್ದೆ.

ಉತ್ತರ ಕರ್ನಾಟಕದ ತುದಿಯಲ್ಲಿನ ಈ ಪುಟ್ಟ ಹಳ್ಳಿ, ಗಂಗಾವತಿ ನನ್ನ ಲ್ಲೇಕೆ ಒಂದು ಸಣ್ಣ ಆಕರ್ಷಣೆಯನ್ನೂ ಹುಟ್ಟಿಸಲಿಲ್ಲ? ಇದನ್ನು ನಾನಿನ್ನೂ ಯೋಚಿಸುತ್ತಲೇ ಇದ್ದೇನೆ. ಗಂಡನೊಡನೆ ಮಲಗಿದ್ದಾಗಲೂ ಹಾಸಿಗೆಯ ಸಂದಿ ಯಿಂದ ಲೊಚಗುಟ್ಟುತ್ತಿದ್ದ ದಪ್ಪ ಹಲ್ಲಿಗಳು, ಮೈಯನ್ನು ಮೂಸುತ್ತಿದ್ದ ಮಂಡರ ಕಪ್ಪೆಗಳು, ಕಕ್ಕಸಿನಲ್ಲಿ ಫ್ಲಷ್ ಎಳೆದೊಡನೆ ಒಮ್ಮೆ ನೀರಿನ ಜೊತೆಗೂ ಪೈಪ್‌ನಿಂದ ಇಳಿದಿದ್ದ ಹಾವು, ಇವು ಮಾತ್ರ ನನ್ನ ಮಾನಸಿಕ ಶಾಂತಿಯನ್ನು ಕದಡಿದ್ದವೇ ಅಥವಾ ನಾನು ಬೆಂಗಳೂರಿನಲ್ಲಿ ಬಿಟ್ಟು ಹೋಗಿದ್ದ ಅನೇಕ ಸಂಬಂಧಗಳು ಸಣ್ಣ ಸಂಗತಿಗಳನ್ನೆಲ್ಲ ನನ್ನ ಪಾಲಿಗೆ ಮೃತ್ಯುಸ್ವರೂಪವೆನ್ನಿಸಿ, ಸಮಸ್ಯೆಗಳನ್ನು ಒಗ್ಗಿಸುತ್ತಿದ್ದೇವೆ?

ಅನಾಥಪ್ರಜ್ಞೆ ತೀವ್ರವಾದಾಗ ಬರಿದೇ ಬೆಚ್ಚುವ ಹಾಗಾಗಬಹುದು. ಪಕ್ಕ ದಲ್ಲಿದ್ದ ಬಳ್ಳಾರಿಗೆ ಗಂಡ ಒಮ್ಮೆ ಹೋಗಿದ್ದಾಗ ಆ ತೀವ್ರ ಬರಗಾಲ ಪ್ರದೇಶ

ವನ್ನು ಎಂದೂ ಸಂಕೈಸದಿದ್ದ ಗಾಳಿ ಗಂಟೆಗಟ್ಟಲೆ ಭರ್‍ರೆಂದು ಬೀಸಿ ನೆಲವೇ ಕೊಚ್ಚಿ ಹೋಗುವಂತೆ ಮಳೆ ಸುರಿದಾಗ ವಿದ್ಯುತ್ ದೀಪಗಳೆಲ್ಲ ಆರಿ. ನನ್ನ ಮೈ ಶೀತಲ ಗಟ್ಟಿದ್ದು; ಕತ್ತಲಲ್ಲಿ ಮಂಡರಗಪ್ಪೆ ನನ್ನ ಮೈಮೇಲೆಲ್ಲಿ ನೆಗೆಯುತ್ತದೋ ಎಂದು ನಡಗುತ್ತ, ಶವದ ಪಕ್ಕದಲ್ಲಿ ಹಣತೆಯನ್ನು ಉರಿಸುವಂತೆ ನನ್ನ ಪಕ್ಕದಲ್ಲಿ ನಾನೇ ಕ್ಯಾಂಡಲ್‌ಗಳನ್ನು ಉರಿಸುತ್ತ ನೆಲದಿಂದ ತಾರಸಿಗೆ ಚಾಚಿಕೊಳ್ಳುತ್ತ ಭಯಂಕರವಾಗಿ ನರ್ತಿಸುತ್ತಿದ್ದ ನೆರಳನ್ನು ವಿಹ್ವಲಳಾಗಿ ನೋಡುತ್ತ ಮಲಗಿದ್ದು; ಹೊಸಪೇಟೆಯಿಂದ ಕಾಲೊನಿಗೆ ವಾಪಸ್ಸು ಹಿಂತಿರುಗಲು ಯಾವ ವಾಹನವೂ ಸಿಗದೆ ಅರ್ಧರಾತ್ರಿಯವರೆಗೆ ಎಲ್ಲ ವಾಹನಗಳನ್ನೂ ಕೈಬೀಸಿ ಕರೆಯುತ್ತ, ಅಮಲೇರಿದ ಡ್ರೈವರನೊಬ್ಬನ ಲಾರಿಯ ಕ್ಯಾಬಿನ್‌ನಲ್ಲಿ ಜೀವ ಹಿಡಿದುಕೊಂಡು ಮನೆ ಸೇರಿದ್ದು; ಇಂತಹ ಅನುಭವಗಳನ್ನು ನೆನಸಿಕೊಂಡಾಗ ಮತ್ತೆ ಅದೇ ಏಕಾಕಿತನ ನನ್ನ ಪೀಡಿಸ ಹತ್ತುತ್ತದೆ. ಈ ವಿಷಮ ಗಳಿಗೆಗಳಲ್ಲಿ ನೆನಪುಗಳ ಮೂಲಕವೇ ನನ್ನನ್ನು ಸಾಂತ್ವನಗೊಳಿಸಿದ್ದ ವ್ಯಕ್ತಿಗಳಿಗಾಗಿ ಮತ್ತೆ ನನ್ನ ಹೃದಯ ಹಂಬಲಿಸುತ್ತದೆ. ದೇಹ ನೈಸರ್ಗಿಕ ಕಾರಣಕ್ಕಾಗಿ ದುರ್ಬಲ ವಾಗಿದ್ದ ಸ್ಥಿತಿಯಲ್ಲಿ ಒಮ್ಮೆ ಪ್ರಯಾಣ ಕೈಗೊಂಡಿದ್ದಾಗ, ಅಮಾವಾಸ್ಯೆಯ ಆ ದಟ್ಟ ಕರಾಳತೆಯಲ್ಲಿ ಯಾವುದೋ ದೈವವನ್ನು ಸಂತೃಪ್ತಗೊಳಿಸಲು ತಮ್ಮಟೆ ಬಾರಿಸುತ್ತ ಕುರಿ ಕೋಳಿಗಳನ್ನು ಬಲಿಗಾಗಿ ಕೊಂಡೊಯ್ಯುತ್ತಿದ್ದ ಜನ ಈಗಲೂ ಒಮ್ಮೊಮ್ಮೆ ನನಗೆ ಮತ್ತೆ ಕಾಣಿಸಿದಂತಾಗಿ ವ್ಯಾಕುಲತೆಯಿಂದ ನಾನೀಗಲೂ ಅಂದಿನಂತೆಯೇ ಮೂಕಿ ಯಾಗುತ್ತೇನೆ.

ಈ ಕುಗ್ರಾಮದಲ್ಲಿ ನಾನು ಕಳೆದ ಹಲವು ತಿಂಗಳು ನನ್ನನ್ನು ಮಾನಸಿಕವಾಗಿ ನಿಸ್ಸಾರಗೊಳಿಸಿದೆ. ಸದಾ ತಂಪು ಜೀವನವನ್ನು ಬಯಸುತ್ತ, ಸುತ್ತಲಿನ ಜನರು, ಪ್ರಾಣಿಗಳು ನಮ್ಮ ಬಗ್ಗೆ ಮೃದುವಾಗೇ ಇರಬೇಕೆಂದು ಬಯಸುವ ನನ್ನಂಥ ಪಟ್ಟಣದ ಹೆಣ್ಣುಗಳು ವಿವಾಹವಾದ ಹೊಸತರಲ್ಲಿ ದೈಹಿಕವಾಗಿ ಹೊಸ ಅನುಭವಗಳಿಗೆ ಅಕ್ಷರಶಃ 'ಮೈಯೊಡ್ಡಿ' ನಿಲ್ಲುವಂತಹ ಸೂಕ್ಷ್ಮ ಸನ್ನಿವೇಶದಲ್ಲಿ ಕಸವಿಸಿಗೊಳಿಸುವ ಇಂತಹ ಘಟನೆಗಳು ಒದಗಿದಾಗ ಅವು ಮನಸ್ಸಿನಲ್ಲಿ ಮಾಸದ ಮುದ್ರೆಯನ್ನೊತ್ತುತ್ತವೆ ಎನ್ನ ಬಹುದಾದರೂ, ನನ್ನ ಸಂದರ್ಭಗಳಲ್ಲಿ ಹಾವು ಚೇಳು ಮಂಡರಗಪ್ಪೆಗಳು, ಮಳೆ ಬಿರು ಗಾಳಿಗಳು ವೈವಾಹಿಕ ಜೀವನದ ಬಗ್ಗೆ ನಾನು ತಳೆದಿದ್ದ ಭಯದ ಸಂಕೇತಗಳಾಗಿ ದ್ದವೇನೋ ಎಂದು ನನಗನ್ನಿಸುತ್ತದೆ.

ಸಮಾಜದ ವಕ್ರದೃಷ್ಟಿಯಿಂದ ತಪ್ಪಿಸಿಕೊಂಡು ಸುರಕ್ಷಿತವಾಗಿರಬೇಕು, ದೈಹಿಕ ಬಯಕೆಯನ್ನು ಪೂರೈಸಿಕೊಳ್ಳಬೇಕು ಎಂಬ ಕಾತುರದಲ್ಲಿ ವಿವಾಹಕ್ಕೆ ತಲೆಯೊಡ್ಡಲು

ಬಯಸಿದ, ತೀರಾ ಬೆಳೆದ ಮೇಲೆ ವಿವಾಹವಾದ ನನ್ನಂಥ ಹೆಣ್ಣಿಗೆ ದೈಹಿಕವಾಗಿ, ಮಾನಸಿಕವಾಗಿ ಎದುರುಗೊಳ್ಳುವ ಎಲ್ಲ ಪ್ರಸಂಗಗಳೂ, ಬಾಳಿಸೊಂದಿಗೆ ಸಹಜವಾಗಿ ಬೆರೆಯದೆ, ಪ್ರತ್ಯೇಕ ರೀತಿಯಲ್ಲಿ ಪರಿಷ್ಕಾರಗೊಳ್ಳುವ ಅನುಭವವಾಗುತ್ತದೆ. ಅನೇಕ ವರ್ಷಗಳ ಕಾಲ ಒಗ್ಗಿದ ಜೀವನ, ವಿವಾಹದ ಹೊಸತರಲ್ಲಿ ಹಿಂದಕ್ಕೆ ಸರಿದು, ಹೊಸ ದೊಂದು ಅನುಭವ ಅವಿಷ್ಕಾರಗೊಂಡಂತೆ ಕಂಡರೂ, ಆ ಅನುಭವ ತಾತ್ಕಾಲಿಕವಾಗಿ, ಹಿಂದಿನ ಪರಿಸರ, ಹಿಂದಿನ ಸಂಬಂಧಗಳು ಇವಕ್ಕೇ ಹಾತೊರೆಯುವಂತಾಗುತ್ತದೆ.

ಕಳೆದ ಜೀವನದ ಅವಧಿಗಿಂತ ಕಳೆಯಲಿರುವ ಜೀವನದ ಅವಧಿ ಕಡಿಮೆ ಎಂದು ನನಗೆ ತಿಳಿಯಪಡಿಸಿಕೊಂಡು ಗಂಡ ಎಷ್ಟು ಮುಖ್ಯನಾದರೂ ಅವನ ಸುತ್ತಲೂ ಹೆಣೆದು ಕೊಂಡಿರುವ ವಾತಾವರಣ ಅಷ್ಟೇ ಮುಖ್ಯ ಎಂಬುದನ್ನು ತಿಳಿಯದೇ ಹೋಗಿದ್ದು ನನ್ನ ಮಾನಸಿಕ ಯಾತನೆಗೆ ಮುಖ್ಯ ಕಾರಣ.

ವೃತ್ತಿಯ ದೃಷ್ಟಿಯಿಂದ ಗಂಗಾವತಿಗೆ ಅನೇಕ ವರ್ಷಗಳಿಂದ ಅಂಟುಕೊಂಡಿದ್ದ ಗಂಡನನ್ನು ನನಗೆ ಪ್ರಿಯವಾದ ಸ್ಥಳದತ್ತ ಎಳೆದು ತಂದ ತೃಪ್ತಿ ನನಗಿದ್ದರೂ, ಕೆಟ್ಟ ಅನುಭವವೊಂದಕ್ಕೆ ನನ್ನನ್ನೇ ನಾನು ಈಡು ಮಾಡಿಕೊಂಡ ನನ್ನ ತಿಳಿಗೇಡಿತನದ ಬಗ್ಗೆ ನನಗಿರುವ ತಿರಸ್ಕಾರ ಜೀವನದುದ್ದಕ್ಕೂ ಮುಂದುವರಿಯುತ್ತವೆ.



## ಶೂದ್ರ ವಿಚಾರ ಸಂಕಿರಣ

ಸೆಪ್ಟಂಬರ್ ಮೊದಲನೆಯ ವಾರದಲ್ಲಿ 'ಶೂದ್ರ'ದ ಆಶ್ರಯದಲ್ಲಿ ಉತ್ತರ ಕರ್ನಾಟಕದ 'ರೈತರ ಹೋರಾಟ'ದ ಬಗ್ಗೆ ಒಂದು ವಿಚಾರ ಸಂಕಿರಣವನ್ನು ಬೆಂಗಳೂರಿನಲ್ಲಿ ಏರ್ಪಡಿಸ ಲಾಗಿದೆ.

ನಮ್ಮ ಸಂದರ್ಭದ ಮಹತ್ವ ಹೋರಾಟವಾದ 'ಕಾಗೋಡು ಚಳುವಳಿ'ಯನ್ನು ಕುರಿತು ಜಿ. ರಾಜಶೇಖರ್‌ರವರು 'ಕಾಗೋಡು ಸತ್ಯಾಗ್ರಹ' ಎಂಬ ಬಹುಮುಖ್ಯ ಪುಸ್ತಕವನ್ನು ಪ್ರಕಟಿಸಿದ್ದಾರೆ. ಇದರ ಬಗ್ಗೆಯೂ ಶೂದ್ರ ಸೆಪ್ಟಂರ್ ಕೊನೆಯವಾರದಲ್ಲಿ ಚರ್ಚೆ ಯನ್ನು ಏರ್ಪಡಿಸಿದೆ.

# ಕನ್ನಡಕ್ಕೆ ತನ್ನದೇ ಆದ ರಂಗಭೂಮಿ

—ಕಿ. ರಂ. ನಾಗರಾಜ

ಕನ್ನಡಕ್ಕೆ ತನ್ನದೇ ಆದ ರಂಗಭೂಮಿ ಎಂಬ ಈ ನನ್ನ ಪ್ರಬಂಧ ಮೇಲು ನೋಟಕ್ಕೆ ತೋರ್ಕೆಯದಾಗಿ ಕಾಣಬಹುದು. ಆದರೆ ಅದನ್ನು ವಿವರಿಸಿಕೊಳ್ಳುವ ಪ್ರಯತ್ನವನ್ನು ನಾವೆಲ್ಲರೂ ಕೂಡಿಯೇ ಮಾಡಬೇಕಾಗಿದೆ. ಎಂದರೆ - ಈ ಹೊತ್ತು ನಮ್ಮೆದುರಿಗೆ ಇರುವ ರಂಗಭೂಮಿಯ ವಿಭಿನ್ನ ನೆಲೆಗಳನ್ನು - ಕನ್ನಡದ್ದೇ ಆದ ರಂಗಭೂಮಿ ಎಂದು ವಿವರಿಸಿಕೊಳ್ಳುವುದು ಹೆಚ್ಚು ಕಷ್ಟವಾದದ್ದೇನೂ ಅಲ್ಲ. ಆದರೆ ಆಧುನಿಕ ಕನ್ನಡ ರಂಗಭೂಮಿಯ ಸಂದರ್ಭದಲ್ಲಿ ಕಾಣಿಸುತ್ತಿರುವ ವಿವಿಧ ಪ್ರವೃತ್ತಿಗಳು, ಮಾರ್ಗಗಳು, ಎದುರಿಸುತ್ತಿರುವ ಸಮಸ್ಯೆಗಳು, ಸಾಧಿಸಿರುವ ಸಾಧನೆಗಳನ್ನು ಹಾಗೂ ಹಿಂಜರಿತಗಳನ್ನು ನಮ್ಮ ಸಂಸ್ಕೃತಿಯ ಅನೇಕ ನೆಲೆಗಳೊಂದಿಗೆ ಪರಿಶೀಲಿಸಬೇಕಾಗಿರುವುದು ರಂಗಭೂಮಿಯಲ್ಲಿ ಆಸಕ್ತರಾಗುವ ನಮ್ಮೆಲ್ಲರ ಆದ್ಯ ಕರ್ತವ್ಯವೆಂದು ತಿಳಿಯಬೇಕಿದೆ.

ಕಳೆದ 10-12 ವರ್ಷಗಳಲ್ಲಿ ಕನ್ನಡ ರಂಗಭೂಮಿ ಅನೇಕ ಸ್ಥಿತ್ಯಂತರಗಳನ್ನು ಎದುರಿಸುತ್ತಲಿದೆ. ಈ ಸ್ಥಿತ್ಯಂತರಗಳು ಹಠಾತ್ತನೆ ಸಂಭವಿಸಿದ ಸ್ಥಿತ್ಯಂತರಗಳಲ್ಲ. ಕನ್ನಡ ರಂಗಭೂಮಿಗೆ ಇರುವ ತನ್ನದೇ ಆದ ಪರಂಪರೆ, ಇತಿಹಾಸ ಇವುಗಳನ್ನು ಅನುಲಕ್ಷಿಸಿದ್ದಾಗಿದೆ. ಹೀಗಾಗಿ ಕನ್ನಡ ರಂಗಭೂಮಿಯ ಪರಂಪರೆಯ ಹಿನ್ನೆಲೆಯಲ್ಲಿ ನಡೆಯುವ ಯಾವುದೇ ಆವಿಷ್ಕಾರ - ಪ್ರೇಕ್ಷಕ ಮತ್ತು ರಂಗಭೂಮಿಗಳ ಸಂದರ್ಭದಲ್ಲೇ ಸಿದ್ಧಗೊಳ್ಳಬೇಕಿರುವುದು ಕೇವಲ ಅನಿವಾರ್ಯ. ನಾಟಕದ ಅಭಿನಯದಲ್ಲಿ ಸಕ್ರಿಯವಾಗಿ ತೊಡಗುವವರ ಉದ್ದೇಶ, ಆಸಕ್ತಿಗಳೇ ನಮ್ಮ ರಂಗಭೂಮಿಯ ಸಂದರ್ಭದಲ್ಲಿ ಮುಖ್ಯವೆಂದು ತಿಳಿಯಲಾಗದು. ಏಕೆಂದರೆ ನಾಟಕ ಪ್ರಯೋಗದಲ್ಲಿ ಆಸಕ್ತರಾಗಿರುವವರ ದೃಷ್ಟಿ - ಪ್ರೇಕ್ಷಕರ ಪಾಲ್ಗೊಳ್ಳುವಿಕೆಯಿಂದ ದೂರ ಸರಿದಂತೆಲ್ಲಾ ಅತ್ಯಂತ ಆತ್ಮೀಯ

ಮಾಧ್ಯಮವಾದ ನಾಟಕ ಹೆಚ್ಚು ಹೆಚ್ಚು ಯಾಂತ್ರಿಕಗೊಳ್ಳುವ ಅಪಾಯವನ್ನು ಎದುರಿಸಬೇಕಾಗುತ್ತದೆ. ಕನ್ನಡ ರಂಗಭೂಮಿಯ ಸಂದರ್ಭದಲ್ಲಿ ಇಂದು ಹೀಗೆ ಆಗುತ್ತಿದೆ.

ಇದಕ್ಕೆ ಮೊದಲು ಕಾರಣವಾಗಿ - ಕಳೆದ ಆರೇಳು ವರ್ಷಗಳಲ್ಲಿ ಕಲಾವಿಲಾಸಿಗಳು ಮೂಲೆಗುಂಪಾಗಿರುವುದನ್ನು ಕುರಿತು ವಿಚಾರ ಮಾಡಬಹುದು. ಇಂದು ಸಾಮಾನ್ಯ ಕಲಾವಿಲಾಸಿಗಳು ಅಥವಾ ಅಭ್ಯಾಸಿಗಳು ನಾಟಕಗಳನ್ನು ಪ್ರಯೋಗಿಸುವ ಧೈರ್ಯವನ್ನು ತೋರಲು ಸಾಧ್ಯವಾಗುತ್ತಿಲ್ಲ. ಹೆಚ್ಚು ಯಾಂತ್ರೀಕೃತವಾದ ಸಾಧನಗಳ ಬಳಕೆಯಿಂದಾಗಿ ಪ್ರಯೋಗವೊಂದಕ್ಕೆ ವಿಪರೀತ ಹಣವನ್ನು ಹಾಕಬೇಕಾದ ಪರಿಸ್ಥಿತಿ ಇದೆ. ಹೆಚ್ಚು ಹಣವನ್ನು ಖರ್ಚು ಮಾಡದೆ ಇಂದಿನ ಸಂದರ್ಭದಲ್ಲಿ ನಾಟಕವೊಂದನ್ನು ರಂಗಭೂಮಿಯ ಮೇಲೆ ತರಲು ಸಾಧ್ಯವಿಲ್ಲ. 'ಸಮುದಾಯ' 'ನಟರಂಗ'ಗಳಂಥ ನಾಟಕ ಸಂಸ್ಥೆಗಳು ಕಲಾವಿಲಾಸಿ ನೆಲೆಗಳಿಂದಲೇ ಹುಟ್ಟಿದವುಗಳಾದರೂ ಅವುಗಳ ಪ್ರವೃತ್ತಿ ಅರೆ - ವೃತ್ತಿ ರಂಗಭೂಮಿಯ ಆಶಯಗಳಿಗೆ ಅನುಗುಣವಾಗಿ ರೂಪುಗೊಂಡಿದೆ. ಒಂದೇ ನಾಟಕದ ಅಸಂಖ್ಯಾತ ಪ್ರಯೋಗಗಳು ನಾಟಕವೊಂದಕ್ಕೆ ಇರಬೇಕಾದ ಆತ್ಮೀಯತೆಯನ್ನು ದೂರತಳ್ಳಿದೆ. ಒಮ್ಮೆ ನಾಟಕವೊಂದನ್ನು ದಿಗ್ದರ್ಶಕ ಚಾಲನೆಗೆ ಕೊಟ್ಟಕೂಡಲೇ ಆ ನಾಟಕದ ಉಳಿದೆಲ್ಲ ಪ್ರಯೋಗಗಳು ಕೇವಲ ತಾಂತ್ರಿಕವಾಗುತ್ತಲಿವೆ. ಇಂಥ ಸ್ವಯಂಚಾಲಿತ ನೆಲೆ ರಂಗಭೂಮಿಯ ಆರೋಗ್ಯದ ದೃಷ್ಟಿಯಿಂದ ತುಂಬಾ ಅಪಾಯ ಕಾರಿ. ಹೀಗಾಗಿ ಅರೆವೃತ್ತಿ ರಂಗಭೂಮಿಗಳು ತಾವು ಹಾಕಿದ ಹಣವನ್ನು ಪಡೆಯುವ ಉದ್ದೇಶವನ್ನು ಹೊಂದಿದ್ದರೂ ಆ ತಂಡಗಳಿಗೆ ವೃತ್ತಿರಂಗಭೂಮಿಯ ಯಾವ ಶಿಸ್ತೂ ಇಲ್ಲವಾಗಿದೆ. ನಟರು - ನಟಿಸುವ ಆಸಕ್ತಿಯಿಂದ ಇಂಥ ಅರೆವೃತ್ತಿ ರಂಗಭೂಮಿಯ ವಲಯಕ್ಕೆ ಬಂದು ಸೇರುತ್ತಾರೆ. ಯಾವ ಪ್ರತಿಫಲವೂ ಇಲ್ಲದೆ ನಾಟಕವೊಂದರಲ್ಲಿ ಅಭಿನಯಿಸುವ ನಟರನ್ನು ಆಯ್ದುಕೊಂಡು ನಾಟಕದ ಮರುಪ್ರದರ್ಶನಗಳು ನಡೆಯು ತ್ತವೆ. ಹೀಗೆ ಅಭಿನಯಿಸುವ ನಟರು ಅನೇಕ ಕಾರಣಗಳಿಂದ ಮೂಲೆಗುಂಪಾಗುತ್ತಾರೆ, ಹೊಸ ನಟರು ಬಂದು ಸೇರುತ್ತಾರೆ. ಆದರೆ ತಮ್ಮ ಧ್ಯೇಯ - ಧೋರಣೆಗಳ ಬಗೆಗೆ ಉದ್ದುದ್ದ ಮಾತಿನ ಸಮರ್ಥನೆ ನಡೆಯುತ್ತಲೇ ಇರುತ್ತದೆ. ಹೀಗೆ ನಾಟಕ – ಪ್ರೇಕ್ಷಕ - ರಂಗಭೂಮಿ ಇವುಗಳ ಆತ್ಮೀಯತೆಯನ್ನು ಕಿತ್ತುಹಾಕಿದ ನಿರ್ದಯ ಸ್ಥಿತಿ ಯೊಂದು ಏರ್ಪಟ್ಟಿರುವುದು ತುಂಬಾ ವಿಷಾದಕರ. ಇಂಥ ಅರೆವೃತ್ತಿ ರಂಗಸಂಸ್ಥೆಗಳ ಆರ್ಥಿಕ ವಿದ್ಯಮಾನಗಳ ಬಗೆಗೆ ನಾವು ಏನನ್ನೂ ತಿಳಿಯುವಂತಿಲ್ಲ. ಇದರಲ್ಲಿ ಅಭಿನಯಿಸುವ ನಟರು ಸಂಬಳ ಸಾರಿಗೆಗಳನ್ನು ಪಡೆಯುವುದಿಲ್ಲ. ಅಲ್ಲದೆ ಅವರು ವಿಧಾನಪರಿಷತ್ತಿನ ಸದಸ್ಯರಂತೆ ಮೇಲಿಂದ ಮೇಲೆ ಬದಲಾಗುತ್ತಾರೆ. ನಾಟಕದ ಪಾತ್ರಧಾರಿಗಳು

ವೇಷ ಬದಲಿಸುವಂತೆ ಇಂಥ ಸಾಮುದಾಯಿಕ ಆಶಯಗಳ ಘೋಷಣೆಗಳನ್ನು ಹೊತ್ತ ಇಂಥ ಅರೆವೃತ್ತಿ ರಂಗಭೂಮಿಯನ್ನು ಪ್ರವೇಶಿಸಿ ಕೆಲವು ಪ್ರಯೋಗಗಳಲ್ಲಿ ಮಾತ್ರ ಕಾಣಿಸಿಕೊಂಡು ಮರೆಯಾಗುತ್ತಾರೆ. ಆದರೆ ಈ ಅರೆವೃತ್ತಿ ರಂಗಭೂಮಿಯ ಯಾಜಮಾನ್ಯವನ್ನು ವಹಿಸುವ ದಿಗ್ದರ್ಶಕ ಮಾತ್ರ ಸ್ಥಾವರವಾಗಿ ನಿಲ್ಲುತ್ತಾನೆ. ಹೀಗಾಗಿ ದಿಗ್ದರ್ಶಕ ಜನಪ್ರಿಯ ಚಲನಚಿತ್ರದ ಮರೆಯಾಗದ ಹೀರೋನಂತೆ ಸದಾ ಕಾಣಿಸಿಕೊಳ್ಳುತ್ತಾನೆ. ಹೀಗಾಗಿ ಕಳೆದ ದಶಕದಲ್ಲಿ ಚುರುಕಾಗಿ ಪ್ರಯೋಗಗಳನ್ನು ನಡೆಸಿದ ಕಲಾವಿಲಾಸಿಗಳು ಈ ಅನಧಿಕೃತ ವೃತ್ತಿ ರಂಗಭೂಮಿಯ ಯಜಮಾನರಿಂದ ಧ್ವಂಸಗೊಂಡಿದ್ದಾರೆ. ಕನ್ನಡಕ್ಕೆ ತನ್ನದೇ ಆದ ರಂಗಭೂಮಿ ಫಲಿಸಲು ಮತ್ತೆ ಕಲಾವಿಲಾಸಿಗಳ ತಂಡಗಳು ಹೆಚ್ಚು ಜಾಗೃತರಾಗಬೇಕಾಗಿದೆ. ಹೀಗೆ ಜಾಗೃತರಾಗಲು ಇರುವ ಇತಿ - ಮಿತಿಗಳು ಅನೇಕ. ರಂಗಪ್ರಯೋಗಕ್ಕೆ ತಕ್ಕ ನಾಟಕ ಮಂದಿರಗಳ ಕೊರತೆ, ನಾಟಕವೊಂದನ್ನು ಸಿದ್ಧಗೊಳಿಸಲು ಬೇಕಾದ ಹಣ ಇವುಗಳ ಸಮಸ್ಯೆ ಇಲ್ಲಿ ತುಂಬ ಮುಖ್ಯವಾದದ್ದು. ಇದಕ್ಕೆ ಸಂಗೀತ - ನಾಟಕ ಅಕಾಡೆಮಿಗಳಂಥ ಸಂಸ್ಥೆಗಳು ಕಲಾವಿಲಾಸಿಗಳ ಹಿತಾಸಕ್ತಿಗಳನ್ನು ರಕ್ಷಿಸಲು ತಕ್ಕ ಪ್ರಯತ್ನವನ್ನು ನಡೆಸಬೇಕು. ನಾಟಕ ಅಕಾಡೆಮಿಗಳಂಥ ಸಂಸ್ಥೆಗಳು ವಿಶೇಷ ಅಧ್ಯಯನಕ್ಕೆ ದೆಹಲಿಯ ನಾಟಕಶಾಲೆಗಳಿಗೆ ಅಭ್ಯರ್ಥಿಗಳನ್ನು ಕಳುಹಿಸುವ ಸದುದ್ದೇಶವನ್ನೇನೋ ಪಡೆದಿದೆ. ಆದರೆ ಇತ್ತೀಚೆಗೆ ನಡೆದಿರುವ ಆಯ್ಕೆಗಳು ಪ್ರಜಾಪ್ರಭುತ್ವವಾದೀ ನಿಲುವುಗಳಿಗೆ ಯಾವ ಪುರಸ್ಕಾರವನ್ನು ನೀಡದೆ ಕೌಟುಂಬಿಕ ವ್ಯವಹಾರದಂತೆ ಸ್ವೇಚ್ಛೆಯಾಗಿ ವರ್ತಿಸುವುದನ್ನು ಗಮನಿಸಿದರೆ– ನಾಟಕ ಮತ್ತು ಜಾಗೃತಿಯ ವಿಚಾರಗಳಿಗೂ ಇಂಥ ವರ್ತನೆಗೂ ಸಾಕಷ್ಟು ಅಸಾಂಗತ್ಯವಿರುವುದನ್ನು ಯಾರೂ ಗಮನಿಸಲು ಸಾಧ್ಯ.

ಅಲ್ಲದೆ ಇಂಥ ಅರೆವೃತ್ತಿ ರಂಗಭೂಮಿಗಳು ಹೆಚ್ಚು ನಗರ ಕೇಂದ್ರಿತವಾದದ್ದು ಅಲ್ಲದೆ ಈ ನಗರ ಕೇಂದ್ರಿತ ನಾಟಕ ಸಂಸ್ಥೆಗಳು ನಾಡಿನ ಬೇರೆ ಬೇರೆ ಪಟ್ಟಣಗಳಿಗೆ ಹೋಗಿ ನಾಟಕ ಪ್ರದರ್ಶನಕ್ಕಾಗಿ ಒಂದೆರಡು ದಿನಗಳ ತಾತ್ಕಾಲಿಕ ಕ್ಯಾಂಪುಗಳನ್ನು ಹಾಕಿ ಅಭಿನಯಿಸಿ ಬರುವ ರೂಢಿ ಬೆಳೆಯುತ್ತಲಿದೆ. ಹೀಗಾಗಿ ನಗರದ ಬಗೆಗೆ ಸ್ವಾಭಾವಿಕವಾಗಿಯೇ ಆಸಕ್ತಿಯನ್ನು ತೋರುವ ಪಟ್ಟಣಗಳು–ತಮ್ಮದೇ ಆದ ರಂಗಭೂಮಿಯೊಂದನ್ನು ಕಂಡುಕೊಳ್ಳಲು ಇಂಥ ಕ್ಯಾಂಪುಗಳು ಅಡ್ಡಿಯನ್ನು ಉಂಟುಮಾಡಿದೆ. ಅಕಾಡೆಮಿಗೆ ಬೆಂಗಳೂರು ಮತ್ತಿತರ ಕಡೆಗಳಲ್ಲಿನ ಒಂದೆರಡು ರಂಗಸಂಸ್ಥೆಗಳು ತನ್ನ ಗಮನದಲ್ಲಿ ಇರುತ್ತದೆಯೇ ಹೊರತು ಗ್ರಾಮೀಣ ಮತ್ತು ಸಣ್ಣ ಪುಟ್ಟ ಪಟ್ಟಣ-ಗಳಲ್ಲಿರುವ ಕಲಾವಿಲಾಸಿಗಳನ್ನು ಸಂಘಟಿಸುವ ಮತ್ತು ಅವುಗಳಿಗೆ ತಕ್ಕ ಅವಕಾಶಗಳನ್ನು ಕಲ್ಪಿಸಿಕೊಡುವ ಉದ್ದೇಶ ಇಲ್ಲವಾಗಿದೆ. ಕರ್ನಾಟಕದ ನಾಟಕ ಅಕಾಡೆಮಿಯು

ಅಧ್ಯಕ್ಷರು – ಕನ್ನಡ ರಂಗಭೂಮಿಯನ್ನು ಹೊಸ ಆವಿಷ್ಕಾರದತ್ತ ಮುನ್ನಡೆಸಿದವರು,
ಸರಿ. ಆದರೆ ಅವರು ಇರುವುದು ದೂರದ ರಾಜಧಾನಿ ದೆಹಲಿಯಲ್ಲಿ! ಹೀಗಾಗಿ
ದೆಹಲಿ – ಬೆಂಗಳೂರುಗಳ ಸಂಪರ್ಕ ಮುಖ್ಯವಾಗಿ – ಕರ್ನಾಟಕದ ಗ್ರಾಮಾಂತರ
ಪ್ರದೇಶದ ನಾಟಕಗಳ ಬಗೆಗೆ ಯಾವ ಎಚ್ಚರವೂ ಮೂಡದಂಥ ಸ್ಥಿತಿಯೊಂದು
ಏರ್ಪಟ್ಟಿದೆ. ಇವೆಲ್ಲಾ ಕನ್ನಡಕ್ಕೆ ತನ್ನದೇ ಆದ ರಂಗಭೂಮಿ ಸಿದ್ಧಗೊಳ್ಳಲು ಇರುವ
ಪ್ರಮುಖ ಅಡ್ಡಿಗಳು ; ಆತಂಕಗಳು.

ನಾಟಕ ಇನ್ನುಳಿದ ಸಾಹಿತ್ಯ ಪ್ರಕಾರಗಳಂತಲ್ಲದೆ ಭಿನ್ನ ಸ್ವರೂಪದ್ದು. ಕಥೆ,
ಕಾದಂಬರಿ, ಪ್ರಬಂಧ, ಕಾವ್ಯ – ಇವುಗಳು ಪ್ರಸಾರಗೊಳ್ಳುವ ಸ್ವರೂಪವೇ ಬೇರೆ.
ಆದರೆ ಶಿಲ್ಪ, ನಾಟಕ, ಸಂಗೀತ - ಇವುಗಳು ಪ್ರಸಾರಗೊಳ್ಳುವ ವಿಧಾನವೇ ಬೇರೆ. ಈ
ಮಾಧ್ಯಮಗಳು ಸೃಜನಶೀಲತೆಯೊಂದನ್ನೇ ಪ್ರಮುಖವನ್ನಾಗಿ ಒಳಗೊಂಡದ್ದಲ್ಲ,
ಅದಕ್ಕಿಂತ ಅವುಗಳು ಸಮೂಹ ಸಂವಹನದ ಆಧಾರದ ಮೇಲೆ ತನ್ನ ಅರ್ಥವ್ಯಾಪ್ತಿ
ಯನ್ನು ಪಡೆಯುವಂಥದ್ದು. ನಾಟಕದ ಕೃತಿಯೇ ನಾಟಕ ಪ್ರಯೋಗವಲ್ಲ, ನಾಟಕ
ಕಾರನ ಮಾತು ಅನೇಕ ತಂತ್ರ ಸಾಧ್ಯತೆಗಳ ಮೂಲಕ ವಿಸ್ತಾರಗೊಳ್ಳುವುದು ಮತ್ತು
ಅರ್ಥಪೂರ್ಣವಾಗಿ ಸಂವಹನಗೊಳ್ಳುವಂತೆ ಮಾಡುವುದು ಇಲ್ಲಿನ ಮುಖ್ಯ ಉದ್ದೇಶ.
ಈ ಸಂವಹನ ಕೇವಲ ಭೌತಿಕ ಸಾಧನೆಗಳಿಂದ, ಯಾಂತ್ರೀಕೃತ ತಂತ್ರಗಳಿಂದ ಹಾಗೂ
ಸಾಂಸ್ಥಿಕ ಅಂಶಗಳಿಂದ ಮಾತ್ರ ಸಿದ್ಧಗೊಳ್ಳುವುದಿಲ್ಲ. ಅದಕ್ಕಿಂತ ಹೆಚ್ಚಾಗಿ ರಂಗ
ಭೂಮಿಯ ಮೇಲೆ ವಿಶ್ಲೇಷಣೆಗೆ, ವಿವೇಚನೆಗೆ ಗುರಿಯಾಗುವುದೇ ಇಲ್ಲಿ ಮುಖ್ಯ.

ನಾವು ರಂಗಭೂಮಿ - ಎಂದ ಕೂಡಲೇ ಅದನ್ನು ಆಡುವ ಸ್ಥಳ ಮತ್ತು ಪ್ರೇಕ್ಷಕರು
ಕೂಡುವ ಸ್ಥಳ ಎಂದು ತಿಳಿದಿದ್ದೇವೆ. ಇದು ನಿಜ. ಇದು ಗ್ರಾಮೀಣ ಬಯಲು
ರಂಗಭೂಮಿಯಾಗಿರಬಹುದು, ಸುಸಜ್ಜಿತ ರವೀಂದ್ರ ಕಲಾಕ್ಷೇತ್ರವಾಗಬಹುದು, ಬೀದಿ
ನಾಟಕಗಳು ಪ್ರದರ್ಶಿತವಾಗುವ ಸ್ಥಳವಾಗಿರಬಹುದು – ಅತ್ಯಂತ ಶ್ರೇಷ್ಠ ನಾಟಕಗಳನ್ನು
ಸಮರ್ಥ ಪ್ರಯೋಗಗಳು ಅನೇಕ ಕಡೆಗಳಲ್ಲಿ ಆಡಿರುವ ಉದಾಹರಣೆಗಳು ಸಾಕಷ್ಟಿವೆ.
ಈಗಲೂ ಗ್ರಾಮಾಂತರ ಪ್ರದೇಶದ ದೇವಾಲಯಗಳ ಅಂಗಳ, ವ್ಯಾಯಾಮಶಾಲೆಗಳಂಥ
ಕಡೆ, ಶಾಲಾ ಕಾಲೇಜುಗಳ ಕೊಠಡಿಗಳೂ ಕೂಡಾ ರಂಗಭೂಮಿಯಾಗಿ ಮಾರ್ಪಡುವು
ದಂತೂ ಸಾಮಾನ್ಯವಾಗಿದೆ. ನಮಗೆಲ್ಲಾ ನಾಟಕದ ಪ್ರದರ್ಶನದ ಪರಿಚಯವಾಗಿರು
ವುದು ಇಂಥ ಕಡೆಗಳಲ್ಲಿಯೇ ಆಗಿದೆ. ಹೀಗಾಗಿ ನಾಟಕದ ಸತ್ವ ಮತ್ತು ಪ್ರದರ್ಶನದ
ಸ್ಥಳ ಇವುಗಳು ಮುಖ್ಯವಾಗದೆ ಆ ನಾಟಕಗಳು ಸಂವಹನಿಸುವ ದ್ರವ್ಯವೇ ಮುಖ್ಯವಾಗು
ತ್ತದೆ ಎಂಬುದೂ ಇಲ್ಲಿ ಮುಖ್ಯ. ಅಲ್ಲದೆ ಬೆಂಗಳೂರಿನಂಥ ಪಟ್ಟಣದಲ್ಲಿ ರಂಗಭೂಮಿ –

ಹೆಚ್ಚು ಜನ ಸೇರಲು ಸಾಧ್ಯವಾಗುವಂಥ ಸ್ಥಳಗಳಲ್ಲಿ ನೆಲೆಗೊಂಡಿರುವುದರಿಂದ ಅಂಥ ಕಡೆಗೆ ಬರುವ ಪ್ರೇಕ್ಷಕರನ್ನು ಬಿಟ್ಟು ಬೇರೆ ಪ್ರೇಕ್ಷಕರು ತಮ್ಮ ತಮ್ಮ ಬಡಾವಣೆಗಳಲ್ಲಿಯೇ ಉಳಿಯುತ್ತಾರೆ. ಈ ಬಗೆಗೆ ನಿನ್ನೆ ಗೆಳೆಯ ಶ್ರೀನಿವಾಸಪ್ರಭು ಅವರು ಪ್ರಸ್ತಾಪಿಸಿದ್ದಾರೆ. ಕಲಾಕ್ಷೇತ್ರದಂಥ ರಂಗಮಂದಿರಗಳ ಹತ್ತಿರ ಬೇರ ಬೇರೆ ಕಡೆಗೆ ಹೋಗಲು ತಕ್ಕ ಬಸ್ ಮಾರ್ಗ, ಸೈಕಲ್, ಕಾರು, ಸ್ಕೂಟರುಗಳನ್ನು ನಿಲ್ಲಿಸಲು ತಕ್ಕ ಸ್ಥಳಾವಕಾಶ ಇರುವುದರಿಂದ ಇಂಥ ರಂಗಮಂದಿರಗಳ ಬಗೆಗೆ ಆಕರ್ಷಣೆ ಸಹಜವಾಗಿಯೇ ಇದೆ.

ಹೀಗಾಗಿ ಕನ್ನಡ ರಂಗಭೂಮಿ ಕೇವಲ ಸಾಂಸ್ಕೃತಿಕ ಸಮಸ್ಯೆಗಳನ್ನಷ್ಟೇ ಅಲ್ಲದೆ ಅನೇಕ ಸಾಮಾಜಿಕ ಸಮಸ್ಯೆಗಳನ್ನು ಕೂಡಾ ಒಳಗೊಂಡಿದೆ.

ನಾಟಕ ಒಂದು ಪ್ರೇಕ್ಷಕ ಸಮುದಾಯದ ಎದುರು ಪ್ರದರ್ಶಿತವಾಗುವ ಕಲಾ ಮಾಧ್ಯಮ. ವೈಯಕ್ತಿಕ ಮತ್ತು ಸಾಂಘಿಕ ಜವಾಬ್ದಾರಿ ಈ ಮಾಧ್ಯಮದ ಮುಖ್ಯ ನೆಲೆ. ಪ್ರದರ್ಶನವಾಗುವ ತತ್‌ಕ್ಷಣದಲ್ಲಿಯೇ ಪ್ರೇಕ್ಷಕರೊಂದಿಗೆ ಸಂಬಂಧ ಪಡೆಯುವುದು ಇಲ್ಲಿ ಮುಖ್ಯ. ನಾಟಕವನ್ನು ಬರೆದ ನಾಟಕಕಾರನಿಗೂ, ಪ್ರೇಕ್ಷಕನಿಗೂ ನೇರ ಸಂಬಂಧ ಏರ್ಪಡುವುದು ಪ್ರದರ್ಶನದ ಒಂದು ಭಾಗ. ಪ್ರದರ್ಶನಕ್ಕೆ ತನ್ನದೇ ಆದ ಕೌಶಲ್ಯ ಮತ್ತು ತಂತ್ರಗಳಿರುವುದರಿಂದ ರಂಗಭೂಮಿಯ ಆವಿಷ್ಕಾರ ಸ್ವೇಚ್ಛೆ ಅಥವಾ ವ್ಯಕ್ತಿಗತ ಆಶಯಗಳಿಗಷ್ಟೇ ಸೀಮಿತವಾಗುವುದಿಲ್ಲ. ಹೀಗಾಗಿ ನಾಟಕವನ್ನಾಡುವವರು ಮತ್ತು ಪ್ರೇಕ್ಷಕರು ಇವರುಗಳ ಮೂಲಕ ಮೂರನೆಯ ನೆಲೆಯೊಂದು ಸೃಷ್ಟಿಯಾಗುತ್ತಿದೆ. ಈ ನೆಲೆಯನ್ನು ಸಾರ್ವಜನಿಕ ಸ್ವರೂಪವೆಂದು ಗುರುತಿಸಬಹುದು. ಪ್ರೇಕ್ಷಕನಿಂದ ಯಾವುದನ್ನೂ ಮರೆಮಾಚಲು ನಾಟಕದಲ್ಲಿ ಸಾಧ್ಯವೇ ಇಲ್ಲ. ಹೀಗಾಗಿ ನಾಟಕ ತನ್ನ ಮೂಲಭೂತ ಸ್ವರೂಪದಲ್ಲಿಯೇ ಮುಕ್ತವಾದದ್ದು. ಇಂಥ ಮುಕ್ತ ಸ್ವರೂಪದಿಂದ ನಾಟಕ ನಮ್ಮ ಸಂಸ್ಕೃತಿಯ ಎಲ್ಲ ಕಂಪನಗಳನ್ನು ಅಭಿ ಕ್ತಿಸುವ ಸಾಧ್ಯತೆಯನ್ನು ಪಡೆದುಕೊಳ್ಳುತ್ತದೆ. ನಾಟಕಕ್ಕೆ ಒಂದು ರೂಪ ಇದೆ. ತನ್ನದೇ ಆದ ಅಸ್ತಿತ್ವ ಮತ್ತು ಜೀವಂತಿಕೆ ಅದಕ್ಕೆ ಇದೆ. ಇವುಗಳೇ ನಾಟಕದ ಜೀವಾಳವೆಂದೋ ಅಥವಾ ಇಂಥ ಜೀವಂತಿಕೆಯೇ ನಾಟಕದ ಚೈತನ್ಯವೋ ನಿರ್ಧಾರವಾಗಿ ಹೇಳಲಾಗದು.

ಇತ್ತೀಚಿನ ದಿನಗಳಲ್ಲಿ ಕನ್ನಡ ರಂಗಭೂಮಿ ತನ್ನ ಅರೆವೃತ್ತಿಯ ಪ್ರವೃತ್ತಿಗಳಿಂದಾಗಿ ಗ್ರಾಹಕರ ರಂಗಭೂಮಿಯಾಗಿದೆಯೇ ಹೊರತು ಪ್ರೇಕ್ಷಕರ ಪಾಲ್ಗೊಳ್ಳುವಿಕೆಯ ಸ್ವರೂಪವನ್ನೇ ಸಂಪೂರ್ಣವಾಗಿ ಕಳೆದುಕೊಂಡಿದೆ. ಸಿನಿಮಾದಂತಲ್ಲದೆ – ನಾಟಕ ಜೀವಂತ

ವ್ಯಕ್ತಿಗಳು ಕ್ರಿಯೆಯಲ್ಲಿ ಪಾಲ್ಗೊಳ್ಳುವುದನ್ನು ಇಲ್ಲಿ ಗಮನಾರ್ಹ. ಸಿನಿಮಾ ಒಂದೇ ಕಾಲಮಾನದಲ್ಲಿ ಎಲ್ಲರನ್ನೂ ನಿರ್ದಿಷ್ಟ ಕನಸಿನ ಪ್ರಪಂಚಕ್ಕೆ ದುಬಾರಿ ಸಾಧ್ಯತೆಗಳಿಂದ ತಳ್ಳುತ್ತದೆ. ಆದರೆ ಅಲ್ಲಿ ಪ್ರೇಕ್ಷಕರ ಪಾಲ್ಗೊಳ್ಳುವಿಕೆ ಅಷ್ಟು ಮುಖ್ಯವಲ್ಲ. ಏಕೆಂದರೆ ಅಲ್ಲಿನ ಸೃಜನಶೀಲ ಮನೋದೂರವೇ ಬೇರೆ. ಆದರೆ ಪ್ರೇಕ್ಷಕರ ಪಾಲ್ಗೊಳ್ಳುವಿಕೆಯಿಂದ ಗ್ರಾಮೀಣ ರಂಗಭೂಮಿ, ಯಕ್ಷಗಾನಗಳು ಮತ್ತಿತರ ನಾಟಕ ಪ್ರಕಾರಗಳು ಇಂದಿಗೂ ಜೀವಂತವಾಗಿಯೇ ಉಳಿದಿದೆ. ರಂಗಭೂಮಿಯು ಸರಳ ಸಾಧನ - ಸಾಮಗ್ರಿಗಳನ್ನು ಒಳಗೊಂಡಿದ್ದರೂ ಪ್ರೇಕ್ಷಕನ ಕಲ್ಪನೆಯಿಂದ ಅವುಗಳು ವಿಸ್ತಾರಗೊಳ್ಳುತ್ತದೆ. ಪ್ರೇಕ್ಷಕನ ಕಲ್ಪನೆಯಲ್ಲೇ ವಿಶಿಷ್ಟ ದೃಶ್ಯ ಹಿನ್ನೆಲೆ ಸೃಷ್ಟಿಗೊಳ್ಳುತ್ತದೆ. ಈ ದೃಷ್ಟಿಯಿಂದ 1920ರ ಅನಂತರದಲ್ಲಿ ರೂಪುಗೊಂಡು ನಮ್ಮಲ್ಲಿಯೂ ಹರಡಿರುವ ರೇಡಿಯೋ ನಾಟಕಗಳನ್ನು ಪರಿಶೀಲಿಸಬಹುದು. ನಾವು ರಂಗನಾಟಕಗಳ ಬಗೆಗೆ ತೋರುವ ಆಸಕ್ತಿಯನ್ನು, ಇನ್ನೂ ಹೆಚ್ಚು ಜನರಿಂದ ಕೇಳಲಾಗುವ ರೇಡಿಯೋ ನಾಟಕಗಳ ಬಗೆಗೆ ಏಕೆ ತೋರುವುದಿಲ್ಲ? ವೇಷಭೂಷಣಗಳಿಗಷ್ಟೇ ಸೀಮಿತಗೊಂಡಿರುವ ಯಕ್ಷಗಾನವನ್ನು ಪ್ರೇಕ್ಷಕ ಸಮಗ್ರವಾಗಿ ಒಪ್ಪುವುದು ಒಂದು ಕಡೆಯಾದರೆ – ರಂಗದ ಯಾಂತ್ರಿಕ ಸಂಪನ್ಮೂಲಗಳು ಅಭ್ಯಾಸವಾಗಿಬಿಟ್ಟಿರುವ ರಂಗಭೂಮಿ ಮತ್ತೊಂದು ಕಡೆ ಸೃಷ್ಟಿಯಾಗಿದೆ. ಆದ್ದರಿಂದಲೇ ಹಣ ಕೊಟ್ಟು ನಾಟಕವನ್ನು ನೋಡುವ ಗ್ರಾಹಕರ ಅಪೇಕ್ಷೆಗೆ ತಕ್ಕಂತೆ ನಾಟಕಗಳು ಸಿದ್ಧವಾಗುವಂಥ ಸ್ವರೂಪವನ್ನು ನಾವು ಗಮನಿಸುತ್ತಿದ್ದೇವೆ. ಈ ಅರ್ಥದಲ್ಲಿಯೇ ನಾನು ಆಧುನಿಕ ನಾಟಕವನ್ನು ಗ್ರಾಹಕರ ಉದ್ದೇಶದಿಂದ ಸಿದ್ಧಗೊಂಡ ಕಲೆಯೆಂದು ಈಗಾಗಲೇ ನಿರ್ದೇಶಿಸಿದ್ದೇನೆ. ಇಂದಿನ ಪ್ರೇಕ್ಷಕನ ಬಹುಪಾಲು ಕಲ್ಪನೆಯನ್ನು ಸಿನಿಮಾ ರೇಡಿಯೋಗಳಂಥ ಮಾಧ್ಯಮಗಳು ತನ್ನ ಕಡೆಗೆ ಸೆಳೆದುಕೊಂಡಿರುವುದರಿಂದ ನಾಟಕದ ಜವಾಬ್ದಾರಿ ಹೆಚ್ಚು ಮಹತ್ವದ್ದೂ, ಸಂಕೀರ್ಣವಾದದ್ದೂ ಆಗಿದೆ.

ಭಾರತದ ಪ್ರತಿಯೊಂದು ರಾಜ್ಯದಲ್ಲಿಯೂ ತನ್ನದೇ ಆದ ರಂಗಭೂಮಿ ಇದೆ. ಈ ಎಲ್ಲ ರಂಗಭೂಮಿಗಳ ಸಾಧ್ಯತೆಗಳು ಆಯಾ ಸಂಸ್ಕೃತಿಯ ವಿಶಿಷ್ಟತೆಗಳು ಅಭಿವ್ಯಕ್ತಿಸುವ ಮಾಧ್ಯಮವೂ ಆಗಿದೆ. ರಂಗಭೂಮಿ ರಾಜಕೀಯ ತತ್ತ್ವಗಳತ್ತ ಪ್ರೇಕ್ಷಕನನ್ನು ಎಚ್ಚರಿಸುವುದಷ್ಟೇ ನಮ್ಮ ರಂಗಭೂಮಿಯ ಆಶಯವಾಗುವುದು ಸಾಧ್ಯವಿಲ್ಲ.

ಕೋಟ್ಯಂತರ ಕನ್ನಡಿಗರು ರಂಗಮಂದಿರವನ್ನು ಪ್ರವೇಶಿಸುವುದು ಶ್ರಮದ ತೀವ್ರತೆಯ ಪರಿಹಾರಕ್ಕಾಗಿಯೂ ಕೂಡಾ ಎಂಬುದನ್ನು ನಾವು ಮರೆಯುವಂತಿಲ್ಲ. ಹೀಗಾಗಿ ಆಸ್ಪತ್ರೆ, ಶಾಲೆ, ಸಿನಿಮಾ ಟಾಕೀಸುಗಳಂತೆ ರಂಗಮಂದಿರವೂ ಒಂದು ಅನಿವಾರ್ಯ ಕೇಂದ್ರ. ಆದರೆ ಇಂಥ ರಂಗಮಂದಿರಗಳು ಕರ್ನಾಟಕದ ಬಹುಪಾಲು

ಪಟ್ಟಣಗಳಲ್ಲಿ, ಹೋಬಳಿಗಳಲ್ಲಿ ಇಲ್ಲ. ಇಂದಿಗೂ ಗ್ರಾಮೀಣ ರಂಗಭೂಮಿ ಒಂದು ಅರ್ಥದಲ್ಲಿ Realistic ರಂಗಭೂಮಿ. ಆದರೆ ವೃತ್ತಿರಂಗಭೂಮಿ ಈ ಗ್ರಾಮೀಣ ರಂಗಭೂಮಿಯನ್ನು ನಾಶಪಡಿಸಲಿಲ್ಲ. ಆದರೆ ವೃತ್ತಿರಂಗಭೂಮಿಯ ಆರ್ಥಿಕ ಚೌಕಟ್ಟನ್ನು ಗ್ರಾಮೀಣ ರಂಗಭೂಮಿ ಒಳಗೊಳ್ಳದಿದ್ದರೂ ಈ ನಾಟಕಗಳ ಪ್ರಭಾವ, ಪರಿಣಾಮ ಗಳು ಗ್ರಾಮೀಣ ರಂಗಭೂಮಿಯ ಮೇಲೆ ತಕ್ಕ ಮಟ್ಟಿನ ಪ್ರಭಾವವನ್ನು ಬೀರಿದೆ. ಆದರೆ ಅದೇರ ವೃತ್ತಿ ರಂಗಭೂಮಿಯು ರೂಪುಗೊಂಡ ಕ್ರಮದಲ್ಲಿ – ಅದು ವೃತ್ತಿರಂಗ ಭೂಮಿಯ ಮೂಲಕ ಕಲಿಯಬೇಕಾದುದನ್ನು ಕಲಿಯದೆ, ಗ್ರಾಮೀಣ ರಂಗಭೂಮಿಯ ಸ್ವರೂಪವನ್ನೂ ಮೈಗೂಡಿಸಿಕೊಳ್ಳದ ಅತಂತ್ರಗೊಂಡ ಸ್ಥಿತಿಯಲ್ಲಿಯೇ ಪ್ರೇಕ್ಷಕರನು ಆಕರ್ಷಿಸುವ ಪ್ರಯತ್ನವನ್ನು ನಡೆಸಿದೆ. ಇದರಿಂದ ಸಮುದಾಯ, ನಟರಂಗಗಳಂಥ್ನ ಮುಖಹೀನ ಅರೆವೃತ್ತಿ ರಂಗ ಸಂಸ್ಥೆಗಳು ನಮ್ಮ ರಂಗಭೂಮಿಯ ಜೀವಂತಿಕೆಯನ್ನು ಬಿಂಬಿಸುವ ಪ್ರಾತಿನಿಧಿಕ ಸ್ವರೂಪವನ್ನೇ ಕಳೆದುಕೊಂಡಿವೆ.

ಹೀಗಾಗಿ ಕನ್ನಡಕ್ಕೆ ತನ್ನದೇ ಆದ ರಂಗಭೂಮಿಯ ಸ್ವರೂಪವನ್ನು ಇಲ್ಲಿ ಸ್ಥೂಲ ವಾಗಿ ನಿರೂಪಿಸಿ ನನ್ನ ಪ್ರಬಂಧವನ್ನು ಮುಗಿಸುತ್ತೇನೆ.

1) ಉತ್ತಮ ನಾಟಕಗಳ ಪ್ರದರ್ಶನ

2) ಕಡಿಮೆ ಪ್ರವೇಶ ಧನ

3) ರಂಗಭೂಮಿಯ ಕೆಲಸವನ್ನು ನಿರ್ವಹಿಸುವವರಿಗೆ ಶಾಶ್ವತ ಉದ್ಯೋಗ ನಿರ್ಮಾಣ ಮತ್ತು ಉದ್ಯೋಗ ರಕ್ಷಣೆ –

4) ರಂಗಭೂಮಿಯ ವಿಕೇಂದ್ರೀಕರಣ ಮತ್ತು ಗ್ರಾಮೀಣ ಪರಿಸರದ ರಂಗ ಭೂಮಿಯ ಯೋಜನೆಗಳು ಹಾಗೂ ನಿರ್ದಿಷ್ಟ ಪ್ರದೇಶಗಳ ಅಗತ್ಯಗಳಿಗೆ ತಕ್ಕ ವಾತಾವರಣ ನಿರ್ಮಾಣ

ಕರ್ನಾಟಕದಾದ್ಯಂತ ಈಗಾಗಲೇ ಇರುವ ರಂಗಮಂದಿರಗಳನ್ನು ಸರ್ಕಾರ ಮತ್ತು Agency ಯಾದ ನಾಟಕ ಅಕಾಡೆಮಿಯಂಥ ಸಂಸ್ಥೆಗಳು ಲೀಸ್ ಮೂಲಕ ತನ್ನ ವಶಕ್ಕೆ ತೆಗೆದುಕೊಳ್ಳುವುದು ಮತ್ತು ರಂಗಮಂದಿರಗಳನ್ನು ಕಡಿಮೆ ಖರ್ಚಿನಲ್ಲಿ ಹೊಸ ದಾಗಿ ನಿರ್ಮಿಸುವುದು, ಆಯಾ ಪ್ರದೇಶದಲ್ಲಿ ದೊರೆಯುವ ಸಾಧನ ಸಾಮಗ್ರಿಗಳ ಮೂಲಕ ಮತ್ತು ಪ್ರದೇಶದಲ್ಲೇ ಇರುವ ಕಲಾವಿದರನ್ನು ಬಳಸಿಕೊಳ್ಳುವುದರ ಮೂಲಕ ರಂಗಮಂದಿರ ಮತ್ತು ನಾಟಕಗಳ ಪ್ರಯೋಗಕ್ಕೆ ತಕ್ಕ ವ್ಯವಸ್ಥೆಯನ್ನು ರೂಪಿಸುವುದು.

ಇದರಿಂದ ಗ್ರಾಮಾಂತರ ಪ್ರದೇಶದ ಪ್ರತಿಭಾವಂತ ನಟವರ್ಗ ಮತ್ತು ಇತರ ಕೌಶಲ್ಯ ಗಳ ಬಗೆಗೆ ಆಸಕ್ತಿ ಇರುವವರನ್ನು ಬಳಸಿಕೊಳ್ಳುವುದು. ಇದರಿಂಧ ಒಂದಿಷ್ಟು ಪ್ರಮಾಣ ವಲ್ಲಿ ಉದ್ಯೋಗಗಳ ಸೃಷ್ಟಿಯೂ ಸಾಧ್ಯ. ಇಂಥ ಸಂಘಟನೆಯನ್ನು ರೂಪಿಸಲು ನಾಟಕ ಅಕಾಡೆಮಿ ಒಂದು ಸಮಗ್ರ ಪ್ರಾದೇಶಿಕ ಯೋಜನೆಯೊಂದನ್ನು ರೂಪಿಸಲು ಸಾಧ್ಯವಿದೆ. ಆದರೆ ಆ ಬಗೆಗೆ ತೀವ್ರ ಚಿಂತನೆಯನ್ನು ಅವರು ಮಾಡಬೇಕಾಗಿದೆ. ಅದನ್ನು ಬಿಟ್ಟು ನಾಟಕ ಅಕಾಡೆಮಿಗೆ ಬೇರೆ ಏನು ಕೆಲಸವಿದೆ? ಇಂಥ ರಂಗಮಂದಿರಗಳನ್ನು ನಾಟಕ ಗಳಿಗಷ್ಟೇ ಸೀಮಿತಗೊಳಿಸಿಕೊಳ್ಳದೆ ಇನ್ನಿತರ ಸಾಂಸ್ಕೃತಿಕ ಚಟುವಟಿಕೆಗಳ ಕೇಂದ್ರ ವನ್ನಾಗಿಯೂ ಮಾಡಿಕೊಳ್ಳಲು ಸಾಧ್ಯವಿದೆ. ಆಯಾ ಪ್ರದೇಶದ ರಂಗಚಟುವಟಿಕೆ ಗಳನ್ನು ಅಭಿವೃದ್ಧಿ ಪಡಿಸುವುದರ ಜೊತೆಗೆ ಕನ್ನಡದ ಸಮರ್ಥ ನಟವರ್ಗದಿಂದ ಕೂಡಿದ ಅನೇಕ ತಂಡಗಳು ಈ ಪ್ರದೇಶದಲ್ಲಿ ನಾಟಕಗಳನ್ನು ಆಡುವುದರಿಂದ ಅರ್ಥಪೂರ್ಣ ಮಾರ್ಗದರ್ಶನವೂ ದೊರೆಯಲು ಸಾಧ್ಯ.

ಒಂದೊಂದು ಪ್ರದೇಶದ ರಂಗಭೂಮಿಗೂ ತನ್ನದೇ ಆದ ಸ್ವಾಯತ್ತತೆಯನ್ನು ಕಲ್ಪಿಸಿಕೊಡುವುದು ಮತ್ತು ಅದಕ್ಕೆ ಪೂರಕವಾದ ಸಂಯೋಜನೆಯನ್ನು ರೂಪಿಸುವುದು ನಮ್ಮ ರಂಗಭೂಮಿಯ ಅರ್ಥವಂತಿಕೆಗೆ ಸಹಕಾರಿಯಾಗುತ್ತದೆ.

(ಸಮುದಾಯ ವಿಚಾರ ಸಂಕಿರಣದಲ್ಲಿ ಮಂಡಿಸಿದ ಪ್ರಬಂಧ)

The word cultural can help us here. The cultural Revolution, in fact, means what it appears to mean : a revolution that right from start exploded not on the social plane-nor, that is at the level of structures-but on the cultural plane, at the level of super structures.

—**Alberto Moravia**

## ತಿಂಗಳಕಾವ್ಯ

### ನೆನಪಾಗುತ್ತದೆ

ಹೌದು ಹುಡುಗಿ, ನಿನ್ನದೇ ನೆನಪಾಗುತ್ತದೆ ನನಗೆ
ಬೀದಿಯ ಉದ್ದಗಲಕ್ಕೆ ತಿರುಗಾಡುವಾಗ
ಸಿಗರೇಟಿನ ಧೂಮ್ರದ ಸುರುಳಿಗಳ ಕಾಣುವಾಗ
ವಿಸ್ಕಿಯ ವಾಸನೆ ತಂಪೆನಿಸಿದಾಗ
ನಿನ್ನ ನೆನಪಾಗುತ್ತದೆ, ಹುಡುಗಿ,
ಹೌದು ನಿನ್ನದೇ ನೆನಪಾಗುತ್ತದೆ.

ಷೋಕೇಸಿನ ಮ್ಯಾಕ್ಸಿ ಮಿನಿಗಳಲ್ಲಿ,
ಪಾರದರ್ಶಕ, ಆಕರ್ಷಕ ಸೀರೆಗಳಲ್ಲಿ
ಎತ್ತರದ ಚಪ್ಪಲಿಗಳ ನಡೆಯಲ್ಲಿ
ಜಂಭದ ಚೀಲಗಳ ಗತ್ತಿನಲ್ಲಿ
ನಿನ್ನ ಕಂಡಂತಾಗುತ್ತದೆ, ಮತ್ತಿನಲಿ ಮತ್ತೆ ನಿನ್ನ ನೆನಪಾಗುತ್ತದೆ.

ಅಂದೊಮ್ಮೆ ನೀನು ಜಾರಿ ಬಿದ್ದದ್ದಕ್ಕೆ ಕೈಕೊಟ್ಟು
ಸಹಾಯ ಮಾಡಿ ಮೇಲೆತ್ತಿದ್ದ ತಪ್ಪಿಗೆ ನೀನೂ
ಆಗಾಗ 'ಕೈ ಕೊಟ್ಟು' ಬಿಟ್ಟೂ ಬಿಡದಂತೆ ನನ್ನ ನೀ
ಹಿಡಿದಿದ್ದ ಕಂಡು ಹೆಮ್ಮೆಯೆನಿಸಿತ್ತು ಹುಡುಗಿ
ಸುತ್ತಮುತ್ತೆಲ್ಲಾ ನಿನ್ನ ನೆನಪಲ್ಲೇ
ಬಾಳು ಜಾಲಿ ಎನಿಸಿತ್ತು.

ಮೈ, ಮನಸ್ಸಿನ ಮೂಲೆಮೂಲೆಯಲ್ಲೂ ಮತ್ತೇರಿಸಿ
ಗೊತ್ತಿಲ್ಲದ ವಿದ್ಯೆಗಳನ್ನೆಲ್ಲಾ ಚಟಚಟನೆ ಕಲಿಸಿ
ಜೇಬ ತುಂಬಿದ್ದ ನೋಟುಗಳ ನಿನ್ನ ನಗೆಯಲ್ಲೇ ಪುಡಿಮಾಡಿಸಿ

ನೂರು ರಾಮರ ಹೆಸರಲ್ಲಿ ಗಾಂಜಾ ಹೊಗೆ ಬಿಟ್ಟಾಗ
ಗಳಗಳ ಅಳಬೇಕೆನಿಸಿತ್ತು ಹುಡುಗಿ ಬದುಕು
ತೂಕ ಕಳೆದುಕೊಂಡಿತ್ತು.

ಈಗಲೂ ಯಾರ್‍ಯಾರ ತೋಳಿನಲ್ಲೋ, ಅಫೀಮಿನ ಗುಂಗಲ್ಲೋ
ನಿನ್ನ ಕಂಡಾಗ

ಅಸಹ್ಯ, ಆಶ್ಚರ್ಯ ಆಗದೇ ಇರುವ ನನಗೆ
ನೀ ಎದುರಿಗೆ ಕಾಣದಿದ್ದರೂ
ದಿನವೆಲ್ಲ ಬೆನ್ನು ಹತ್ತಿದ ಬೇತಾಳನಂತೆ ಕಾಣುವ
ನನ್ನ ನೆರಳಲ್ಲಿ ನಿನ್ನ ಕಂಡಂತಾಗುವಾಗ
ಬೆಚ್ಚುವಂತಾಗಿ, ಮನ ಬಿಚ್ಚುವಂತಾಗಿ
ನೆನಪಾಗುತ್ತದೆ ಹೌದು ಹುಡುಗಿ
ನಿನ್ನದೇ ನೆನಪಾಗುತ್ತದೆ.

ಕೆ. ಎನ್. ಶಶಿಪ್ರಭಾ

## ಓ ತಿರುಪತಿ ವೆಂಕಟರಮಣ

ಓ ತಿರುಪತಿ ವೆಂಕಟರಮಣ
ಕೆತ್ತಬೇಕೆಂದಿರುವೆನಯ್ಯಾ ನಿನ್ನ ಮೈಸೆಣ
ಕರಿಮುಖದ ಬಕರಾ ಪಡುಕೊಂಡಲವಾಡ
ಕಾದಸೀಸದ ರಸವು ಸುಪ್ರಭಾತದಬಾಡ
ಮದುವೆಗೆ ಮುನ್ನ ಬಸಿರಾದವರ ಹೊಟ್ಟೆ ಇಳಿಸುತ್ತ
ಲಂಚ ಕಕ್ಕದ ಗಂಡ ಹೆಂಡಿರನ್ನಗಲಿಸುತ್ತ
ಒಕ್ಕಲಿಲ್ಲದವರ ಗರ್ಭದಲ್ಲಿ ಕಲ್ಲುಮುಳ್ಳಾದವನೆ
ತುಡುಗು ದನಗಳಿಗೆ ತಲೆಯ ಮೇಯಬಿಟ್ಟವನೆ
ತಾಳಿಯಪಹರಿಸಿ ಮೈಗೆಮುಡಿದಿರುವ ಟಿನ್ನು ಚಿನ್ನದ ಸುತ್ತ
ಡೊಳ್ಳು ಹೊಟ್ಟೆಗಳನ್ನು ಕಾವಲಿಟ್ಟವನೆ
ಎದೆಯ ಸುಡುಗಾಡಿನಲ್ಲಿ ಕಾಗೆಹದ್ದು ಗಿಡುಗಗಳನ್ನು ಸಾಕಿ
ಲಡ್ಡು ಪರಮಾನ್ನ ಹೋಳಿಗೆರಾಶಿ ಮೇಯಲಿಟ್ಟವನೆ

ಬಂದ ಭಕ್ತರ ಕಣ್ಣಿಗೆ ಕಾರಪುಡಿ ಚೆಲ್ಲಿ ತಲೆಗೂದಲನ್ನು ಬೋಳಿ
ಸುವ "ವೆಂಕಟೇಶ್ವರ ಹೇರ್ ಕಟ್ಟಿಂಗ್ ಸೂಲೂನಿ"ನ ಮಾಲಿಕ ಗೋವಿಂದನೆ
ಗಂಡರನಗಲಿಸಿ ಹೆಣ್ಣುಗಳನ್ನು ಗೋವಿಂದಪಟ್ಟಣ ರೇಣುಗುಂಟಗಳಂಥ
ಶಹರಗಳಲ್ಲಿ ಮಲಗಲಿಟ್ಟವನೆ
ಗೊನೋರಿಯಾ ಸಿಫಿಲಿಸ್ ವ್ರಣಗಳೊಸರಿದ ಕೀವನ್ನು
ತಗ್ಗೊಂದರಲ್ಲಿ ಬಸಿದಿಟ್ಟು 'ಪಾಪವಿನಾಶಿನಿತೀರ್ಥ' ಎಂಬ ಹೆಸರನ್ನದೆ ಇಟ್ಟು
ಅದರೊಳಗೆ ಮೆದುಳಿರದ ಕುರಿಗಳನ್ನು ಮಿಾಯ ಬಿಟ್ಟವನೆ
ಮೈಲುಗಳುದ್ದದ 'ಕ್ಯೂ' ಗಳಲ್ಲಿ ಜೇಬು ಕತ್ತರಿಸುವವನೆ
ಆಕಳಿಸಿದ ಹೆಂಗಸರ ಅಂಡುಗಳನ್ನು ಸವರಿ ಜೊಲ್ಲು ಸುರಿಸುವವನೆ
ತಲೆಗಳಿಗೆ ಕನ್ನಹಾಕಿ ಮೆದುಳುಗಳ ಕದ್ದವನೆ.
ಖದ್ದಾರು ಬಟ್ಟೆಗಳಲ್ಲಿ ಲಿಂಗಗಳ ತಿದ್ದುವವನೆ
ಅಲುಮೇಲುವಿನ ಹಳಸಿದ ಮೈ ಬಿಟ್ಟು
ಕಂಚಿ ಕಾಮಾಕ್ಷಿ ಮಧುರೈ ಮಿಾನಾಕ್ಷಿ ಗಳಂಥ
ದೇವಲೋಕದ ಕ್ಲಾಸ್‌ಒನ್ ಸೂಳೆಯರ ಜೊತೆ ಮಲಗಿ
ಉತ್ತಿಷ್ಠೋತ್ತಿಷ್ಠ ಗೋವಿಂದ....ಅಂತ
ಶನಿವಾರದ ಬೆಳಿಗ್ಗೆ ಆಕಾಶವಾಣಿಗಳು ಆಕಳಿಸುತ್ತವದರಿದಾಗ
ಏಳುವ ಹಾಳು ಮುಖದವನೆ
ಹೃದಯವಿಲ್ಲದ ಮೈಗೆ ಮುಡಿದಿರುವ ನವರತ್ನಗಳು
ಗೋಪುರಕ್ಕೆ ಬಡಿದಿರುವ ಬಂಗಾರ
ನೆಲದೊಳಗೆ ಕೊಳೆಯುವ ಕೋಟ್ಯಾಂತರಹಣ
ಇದೆಲ್ಲ ಯಾರಪ್ಪನ ಮನೆಗಂಟಯ್ಯಾ ತಿರುಪತಿಯ ತಿಮ್ಮಯ್ಯಾ
ನಿನ್ನಪ್ಪ ನಿನ್ನತಾತ ಮುತ್ತಾಂದಿರ ಸ್ವತ್ತಲ್ಲ
ನಿನ್ನ ತಲೆಹಿಡುಕ ಡೊಳ್ಳುಹೊಟ್ಟೆಯ ಭಟ್ಟರು ಬೆವರಿಳಿಸಿದುಡಿದದ್ದಲ್ಲ
ಅದು ನನ್ನಜನರು ಕಣೋ
ಮನುಷ್ಯರಂತೆ ಏಳು ಕೊಂಡಗಳನ್ನು ಹತ್ತಿ
ಹೆಣಗಾಗಿ ಮರಳಿ ಜೋಳ ಬೆಳೆಯುವ ನನ್ನೀಕಪ್ಪು ನೆಲದತುಂಬ
ತಿರುಪತಿಯ ಬ್ರಾಂಚುಗಳನ್ನು ತೆರೆದು
ನಿನ್ನ ದರಿದ್ರ ನಾಮಾವಳಿ ಬಿತ್ತುವ
ನಿನ್ನ ಜೋಬದ್ರ ಭಕ್ತರ ನಡುವೆ
ನಾನ್ಹೇಗೆ ಬದುಕಲಯ್ಯಾ ?

ನಿನ್ನ ವಿರುದ್ಧ ಹೋರಾಡದೆ
ಅದ್ಹೇಗೆ ಸುಮ್ಮನಿರಲಯ್ಯಾ ?

ಕುಂ. ವೀರಭದ್ರಪ್ಪ

## ಪ್ರಶ್ನೆ - ಉತ್ತರ

– ೧ –

ತಮ್ಮ ದೇಶದಲ್ಲಿ ಎತ್ತರೆತ್ತರದ ಮನೆ
ಕಟ್ಟಿಸಿ ಸುತ್ತ ಕಾಂಪೌಂಡು ಹಾಕಿಸಿ ಒಳಗೆ
ಬುರ್ಖಾದೊಳಗೆ ಆಭರಣಗಳ ಬೇಡಿಯಲ್ಲಿ
ಹೆಂಡತಿಯರನ್ನು ಬಂಧಿಸಿಟ್ಟ
ಇರಾನಿ ಹುಡುಗರ
ತುಂಬು ಜೇಬಿಗೆ ಕೆಂಪು ಮೂತಿಗೆ
ಮರುಳಾಗಿ, ಸ್ವಚ್ಛಂದ ಸಲ್ಲಾಪ ಮಾಡುವ
ಬೆಂಗಳೂರಿನ ಮಡಿವಂತ ಮನೆಗಳ ಹುಡುಗಿಯರು !

– ೨ –

ಕಡೆಗೂ ಒಪ್ಪಿ ತಮ್ಮ
"ಬೇಳೆಹುಳಿ ವಾಸನೆ"ಯನ್ನು ಝಾಡಿಸಿಕೊಂಡ,
ಗಾಢ ಇರಾನಿ ಸೆಂಟಿನ ಮತ್ತರು.
ಇನ್ನೀಗ ಅವರ ರಕ್ತವೆಲ್ಲ ಅತ್ತರು.

ವಿ. ಆರ್. ಪ್ರತಿಭಾ

# ಕುರುರಾಜನ ಆಸ್ಥಾನದಲ್ಲಿ ನಡೆದ ದ್ರೌಪದಿ ಆಕ್ರೋಶ ಪ್ರಸಂಗವು

ತಿಂದದ್ದಕ್ಕೆ ನಾಯಿಗಳಾಗಿ ಬಾಲ ಬೀಸಿ
ಅಡಿತಲೆಗಳಾಗುವ ನಿಮ್ಮೆದುರೇ ಕನ್ನವಿಕ್ಕುತ್ತಾರೆ
ನನ್ನ ಪಂಚಮ
ಹಲಿಗೆ. ಬೊಗಳಲೂ ನಾಚಿಕೆಯೇ ನಿಮಗೆ ?

ಹಗಲು ರಾತ್ರಿಗಳ ಭೇದವಿಲ್ಲದ ನೀವು
ಸೂಳೆಯೊಡನೆ ಹೊರಳಾಡಿಯೂ
ಮುಷ್ಟಿ ಮೈಥುನದಲ್ಲಿ ಸುಖ ಕಾಣುತ್ತೀರಿ.
ಈಗ ಸಡಿಲಾದ
ನನ್ನ ಲಂಗ ಬಟ್ಟೆಗಳಡಿಯಲ್ಲಿ
ಸ್ವರ್ಗ ಹುಡುಕುತ್ತೀರಿ....

ಕಾಣಿಸುತ್ತಾವೆ ನನಗೆ—

ನನ್ನನ್ನೇ ಸೂರೆಗೊಳ್ಳುವ ನರಸತ್ತವರ
ಕೆಟ್ಟ ಕಣ್ಣುಗಳ ಆಶೆಗಳು
ಬುದ್ಧಿ ಜೀವಿಗಳ ಮೌಢ್ಯಗಳು,
ಎಲ್ಲೆಂದರಲ್ಲಿ ತಿದಿಯೊತ್ತುವ ಪೊಟ್ಟು ಬಯಕೆಗಳು
ಮತ್ತೆ ಹೊಕ್ಕುಳಿನ ಕೆಳಗೆ. ಬಿದ್ದು
ಮರೆಯಾಗುವ ಧರ್ಮಗಳು,

ಪ್ರತಿಭಟಿಸಲೇ ಬೇಕು ನೀವೆಲ್ಲಾ....

ದುಃಶ್ಯಾಸನ ರೂಪದ ರಾಜನ ಶೋಷಣೆಯನ್ನು
ಕುರಿಗಳಾದ ಕುರುಡು ಜನರ ಹಿಂಡುಗಳ ಜೊತೆಗೆ
ಕಣ್ಣಿದ್ದೂ ಕುರಿಗಳಾದವರ
ಹಾದಳಕೆ ಹುಟ್ಟಿ ಮೆರೆವ ಈ ಪ್ರಾಜ್ಞರನ್ನು
ನನ್ನವರಿಗೆ ಬುದ್ಧಿ ಕಲಿಸಿದ ಈ
ಲಫಂಗ ಗುರುಹಿರಿಯರನ್ನು
ಅವಕಾಶ ಸಿಕ್ಕಾಗಲೆಲ್ಲಾ ಅಪ್ಪಿ ಅಂಗಾತ ಮಲಗಿಸುವ
ಈ ಪಂಚಮ ಹಾ ಗಂಡಂದಿರನ್ನು

ಹಾಯುಬಲ್ಲೆ ನಾನೀಗ

ಬೆಂಕಿ ಕಿಡಿಗಳ ಮಧ್ಯೆ ಸಿಡಿಲು ಸೀರೆಯು
ಬಿಗಿದು ಬದುಕಬಲ್ಲೆ,
ಒದೆತಗಳಿಗೆ ಎದೆಯೊಡ್ಡಿ ಸಿಡಿಗುಂಡಾಗಿ
ಸಿಡಿಯುಬಲ್ಲೆ,
ಅದಕ್ಕೂ ಮುನ್ನ ಸತ್ತವರಿಗೊಂದು
ಗುಂಡಿತೋಡಬೇಕಾಗಿದೆ ಅಷ್ಟೆ.

**ಪುರುಷೋತ್ತಮ, ಬಿಳಿಮಲೆ**

ಸ್ತ್ರೀಯು ಯಾವದಿನ ಮೊದಲನೆಯ ಸಾರಿ ಕಣ್ಣೀರನ್ನು ಸುರಿಸುವಳೋ ಅದಾಕೆಗೆ ಬಹು ಆನಂದದ ದಿನವು; ಏಕೆಂದರೆ ಆದಿನ ಆಕೆಗೆ ಅಬಲೆಯಾದ ತನ್ನ ಏಕಮಾತ್ರ ಬಲದ ಪರಿಚಯವಾಗುವುದು.

**—ಪಂಡಿತ ತಾರಾನಾಥ**

## ನೋವು

೧. ಹೊಳೆಯ ದಡ
ಸೀಗೆ ಮೆಳೆ
ನಡುವೆ ಸಿಕ್ಕ
ಬಾಳೆ ಎಲೆ।

೨. ಊರಿನಲ್ಲಿ
ಚೇಳ ಕಡಿತ
ವಿಷದ ಊಟ
ನಿದ್ದೆ ಹಾಳು।

೩. ಹಸಿರು ಎಲೆ
ಬಿಳಿಯ ಹೂವು
ಸಂಜೆ ಸಮಯ
ಕೆಂಪು ಕಿರಣ
ಕೊಂಬೆಯಲ್ಲಿ
ಕುಳಿತ ಗಿಳಿ
ಕೂಗಿ ಕರೆದಿತ್ತು
ಹಾಡಿ ನಲಿದಿತ್ತು।

೪. ಹೊಲಗದ್ದೆ
ಬರಿದ ತೆನೆ
ಕಣನೀರು
ದುಃಖಭಾಗ
ಮರೆಯಾದ
ಕುಡುಗೋಲು।

೫. ಕುಡಿವ
ಬಟ್ಟಲ ಗಂಜಿ
ಮಾತುಬರಹ
ಬರಹ ಮಾತು
ಅಡ್ಡ ತೆರೆ
ದೂರ ದೂರ
ಆದ ಸಮಯ।

೬. ಕೆರೆಯಲ್ಲಿ ನೀರು
ಮುಚ್ಚಿದ ತೂಬು
ತೋಟಿ ಕಾವಲು।

೦ ೦ ೦ ೦

ಲೀಲಾ—
ಜಾಲವಾಗಿ
ತೇಲಿಬಂದ
ನೆನಪುಗಳು
ಕಾಡುತಿವೆ
ನನ್ನ. ॥

ಕೆ. ಎಂ. ಮುನಿಕೃಷ್ಣಪ್ಪ

# ಜನಾನಾ

ಮುಸಲ್ಮಾನ ಹೆಂಗಸರು ಇರುವ ಅಂತಃಪುರಕ್ಕೆ 'ಜನಾನಾ' ಎಂದು ಹೆಸರು. ಜನ್ ಅಂದರೆ ಹೆಂಗಸು. ಜನಾನಾ ಅಂದರೆ ಹೆಂಗಸರು ವಾಸಮಾಡುವ ಸ್ಥಳ. ಗಂಡಸರಿಗೂ ಹೆಂಗಸರಿಗೂ ಬೇರೆ ಬೇರೆ ಸ್ಥಳಗಳ ಏರ್ಪಾಡು ಮಾಡುವುದಕ್ಕೇನು ಕಾರಣವೆಂಬುದನ್ನು ವಿಚಾರಿಸಬೇಕು. ಉಚ್ಚ ನೀಚಭಾವದಿಂದ ಈ ಏರ್ಪಾಡು ಉಂಟಾಯಿತೋ ಅಥವಾ ಗಂಡಸರಿಗೂ ಹೆಂಗಸರಿಗೂ ಹಿತವಾಗುವಂತೆ ಅದು ಮಾಡಲ್ಪಟ್ಟಿತೋ ? ಮುಸಲ್ಮಾನರ ಧರ್ಮಸ್ಥಾಪಕನಾದ ಮಹಮ್ಮದನ ವಾಕ್ಯಗಳನ್ನೇ ಪರಿಶೀಲಿಸಿ ನೋಡೋಣ. ಹೆಂಗಸರನ್ನು ಅವನು ನೀಚರೆಂದು ಭಾವಿಸುತ್ತಿದ್ದನೋ ಇಲ್ಲವೋ ಎಂಬ ಸಂಗತಿಯು ಒಡೆದುಕಾಣುವುದು. ಅನುವಾದಿಸಿರುವ ಈ ವಾಕ್ಯಾರ್ಥವನ್ನು ಗಮನಿಸಿ ವಾಚಕರು ತಾವೇ ತಿಳಿದುಕೊಳ್ಳುವದು ಉತ್ತಮ.

1. "ಪವಿತ್ರನಾಗಿ ಪರಮಾತ್ಮನನ್ನು ಕಾಣಲು ಇಚ್ಛಿಸುವವನು ಯೋಗ್ಯಳಾದ ಮತ್ತು ಸ್ವತಂತ್ರಳಾದ ಸ್ತ್ರೀಯರನ್ನು ವರಿಸಿಕೊಳ್ಳಬೇಕು.
2. "ಮುಸಲ್ಮಾನನ್ನು ತನ್ನ ಹೆಂಡತಿಯನ್ನು ದ್ವೇಷಿಸಬಾರದು".
3. ನಿಮ್ಮ ಹೆಂಡಂದಿರನ್ನು ನೀವು ಹೊಡೆಯಬಾರದು."
4. ತನ್ನ ಹೆಂಡತಿಯೊಡನೆ ಅತ್ಯುತ್ತಮವಾಗಿ ವರ್ತಿಸುವವನೇ ಉತ್ತಮನು".

ಇಂತಹ ಅನೇಕ ಉಪದೇಶಗಳನ್ನು ಮುಸಲ್ಮಾನ ಧರ್ಮಗ್ರಂಥಗಳಲ್ಲಿ ಕಾಣ

---

ದಿ|| ಪಂಡಿತ ತಾರಾನಾಥರ ಬಗ್ಗೆ ಮಾತನಾಡುವಾಗಲೆಲ್ಲ; ಅವರೊಬ್ಬ ಪ್ರಖ್ಯಾತ ವೈದ್ಯರಾಗಿದ್ದರೆಂದು ಮೆಚ್ಚಿಗೆ ಸೂಚಿಸಿ ಸುಮ್ಮನಾಗುತ್ತೇವೆ. ಆದರೆ ಅವರು ಒಬ್ಬ ಸಮಾಜ ವಿಜ್ಞಾನಿಯಾಗಿ ಇಲ್ಲಿಯ ಏರುಪೇರುಗಳಿಗೆ ಔಷಧಿಯನ್ನು ಕಂಡುಕೊಂಡವರು. ಈ ದೃಷ್ಟಿಯಿಂದ 'ಜನಾನಾ'ಕ್ಕೆ ಸಂಬಂಧಿಸಿದ ಈ ಲೇಖನ ತುಂಬ ಉಪಯುಕ್ತವಾಗಿದೆ. ಹಾಗೆಯೇ ಈ ಲೇಖನವನ್ನು 'ರತಿವಿಜ್ಞಾನ' (ಬರುತ್ತಿರುವ) ಎಂಬ ಮಾಸಪತ್ರಿಕೆಯಿಂದ ಪಡೆಯಲಾಗಿದೆ. ಇದಕ್ಕೆ ಕಾರಣರಾದ ಶ್ರೀ ಹರ್ಷ ಮತ್ತು ಕಿ. ರಂ. ರವರಿಗೆ ಶೂದ್ರ ಕೃತಜ್ಞತೆ ಸೂಚಿಸುತ್ತೆ.

ಬಹುದು. ಇಲ್ಲಿ ಅವತರಿಸಿದ ಕೆಲವು ವಾಕ್ಯಗಳಿಂದ ಹೆಂಗಸರಿಗೆ ಸನ್ಮಾನವು ಆ ಮತದಲ್ಲಿ ಧಾರಾಳವಾಗಿದೆ ಎಂಬುದು ಸ್ಪಷ್ಟವಾಗುವುದಿಲ್ಲವೋ ?

ಆದರೆ ಕೆಲವರು ಮುಸಲ್ಮಾನ ಹೆಂಗಸರ 'ಘೋಷಾ' ಪದ್ಧತಿಯನ್ನು ಕಂಡು ಘೋಷಾ ಮತ್ತು 'ಜನಾನಾ' ಎರಡೂ ಒಂದೇ ಎಂದುಂಧುಕೊಂಡು ತಪ್ಪಿಹೋಗಿ "ಮುಸಲ್ಮಾನರು ಹೆಂಗಸರನ್ನು ಮುಚ್ಚಿಡುತ್ತಾರೆ" ಎಂದು ಹೇಳುತ್ತಾರೆ. ಇದು ಕೆಟ್ಟ ತಪ್ಪು. ಮನೆಯಲ್ಲಿ ಜನಾನಾ ಯಾವಾಗಲೂ ಯೋಗ್ಯವೆ ಮತ್ತು ಹೊರಗೆ ಘೋಷಾಪದ್ಧತಿಯು ಮತಸ್ಥಾಪನೆಯ ಕಾಲದಲ್ಲಿ ಯೋಗ್ಯ ಮತ್ತು ಅಗತ್ಯವೇ ಆಗಿತ್ತು ಎಂಬುದು ವಿಚಾರಿಸಿನೋಡಿದರೆ ತಿಳಿದುಬರುವುದು. ಮೊದಲು ಘೋಷಾ ಪದ್ಧತಿಯ ವಿಷಯ ಚರ್ಚಿಸೋಣ. ಅದನ್ನು ಮಹಮ್ಮದನು ಸ್ಥಾಪಿಸಲಿಲ್ಲ. ಅದು ಆತನ ದೇಶದಲ್ಲಿಯ ಒಂದು ರೂಢಿ. ಆತನು ಇಸ್ಲಾಮು ಧರ್ಮವನ್ನು ಸ್ಥಾಪಿಸುವುದಕ್ಕೆ ಮೊದಲು ಅರಬಸ್ಥಾನದ ಸ್ಥಿತಿ ಹೇಗಿತ್ತು ಎಂಬುದನ್ನು ಇತಿಹಾಸದ ಮೂಲಕ ತಿಳಿದುಕೊಳ್ಳಬೇಕು. ಆಗಿನ ಅರಬರಿಗೆ ನ್ಯಾಯನೀತಿಗಳ ವಾಸನೆಯು ಸಹ ಇರಲಿಲ್ಲ. ಹೆಂಗಸರನ್ನು ಇತರ ವಸ್ತುಗಳಂತೆಯೇ ಭೋಗಸಾಮಗ್ರಿಗಳೆಂದು ಅವರು ತಿಳಿದುಕೊಂಡಿದ್ದರು. ಬೇಕಾದಷ್ಟು ಹೆಂಡಂದಿರನ್ನು ಬೇಕಾದ ರೀತಿಯಿಂದ ಮಾಡಿಕೊಳ್ಳುವದೂ ಬಿಟ್ಟುಬಿಡುವದೂ ಅವರ ಸ್ವಚ್ಛಂದ ವೃತ್ತಿಯನ್ನವಲಂಬಿಸಿತ್ತು. ಇಲ್ಲಿಯೂ ರಾಕ್ಷಸ, ಪೈಶಾಚ್ಯ ವಿವಾಹಗಳು ಒಂದುಕಾಲದಲ್ಲಿದ್ದವಷ್ಟೆ. "ಜನತೆಯೂ ವಿಚಾರದಿಂದಲೇ ಪ್ರಗತಿಯನ್ನೈದಿ ಸುಖಪಡುತ್ತದೆ." ಅಂತಹ ಕೆಟ್ಟಕಾಲದಲ್ಲಿ ಹೆಂಗಸರು ತಮ್ಮ ರೂಪವನ್ನು ಮರೆಮಾಚಿಕೊಂಡು ತಮ್ಮನ್ನು ಕಾಪಾಡಿಕೊಳ್ಳುವ ಪ್ರಯತ್ನವನ್ನು ಮಾಡುತ್ತಿದ್ದರು. ಮಹಮ್ಮದನು ಧರ್ಮ ತತ್ವಗಳನ್ನೇನೋ ಸಾರಿದನು. ಆದರೆ ತತ್ವಗಳು ಅದರ ಆಚರಣೆಯಲ್ಲಿ ಬರಬೇಕಲ್ಲವೇ ? ಅದಾದಮೇಲಲ್ಲವೇ ಹೆಂಗಸರಿಗೆ ಸ್ವಾತಂತ್ರ್ಯವು. ತಾನೇ ಬರುವುದು ? ಗಂಡಸರ ನಡತೆಯು ಹತೋಟಿಗೆ ಬರುವವರೆಗಾದರೂ 'ಘೋಷಾ' ಇರಲೇಬೇಕಷ್ಟೆ ? ಇವೇ ಮೊದಲಾದ ವಿಚಾರಗಳನ್ನು ಮಾಡುತ್ತ ಒಳ್ಳೇ ಕಾಲವು ಬರುವವರೆಗೂ ಆ ಘೋಷಾ ಇದ್ದಂತಿರಲಿ ಎಂದು ಆತನು ಅದನ್ನು ಕುರಿತು ಮಾರ್ಪಾಡುಗಳನ್ನು ಮಾಡಲಿಲ್ಲ. ಇದರಿಂದ ಮುಸಲ್ಮಾನ ಸ್ತ್ರೀಯರಿಗೆ ಸ್ವಾತಂತ್ರ್ಯವಿಲ್ಲವೆಂದು ತಿಳಿದುಕೊಳ್ಳುವುದು ಮೂರ್ಖತನ. ತಮ್ಮ ಮಾನವನ್ನು ಕಾಪಾಡುವದಕ್ಕಾಗಿ ಒಂದು ಮುಸುಕನ್ನು ಹಾಕಿಕೊಂಡರೆ, ಆ ಮುಸುಕು ಬಂಧನವಾಗುವುದೆಂತು ? ಮೊದಲನೆಯ ಅವತರಣಿಕೆಯಲ್ಲಿ ಸ್ವತಂತ್ರ ಎಂಬ ಶಬ್ದವನ್ನು ನೋಡಿರಿ. ಅವಳ ತನುಮನಸ್ಸುಗಳಿಗೂ ಸ್ವಾತಂತ್ರ್ಯವಿದೆ ಎಂಬುದು ಇದರಿಂದ ತಿಳಿಯುತ್ತದೆ.

'ಜನಾನಾ' ಎಂದರೆ ಸೆರೆಮನೆಯೆಂದು ಅನೇಕರ ಭಾವ. ಇದು ತಪ್ಪು. ಹೆಂಗಸರಿಗೆ ಬೇಕಾದಷ್ಟು ಸ್ವಾತಂತ್ರ್ಯವನ್ನೊದಗಿಸಿಕೊಡುವದಕ್ಕಾಗಿ ಅದು ಏರ್ಪಟ್ಟಿದೆ. ಅಲ್ಲಿ ಹೆಂಗಸರು ಮಾತ್ರ ಅಪ್ಪಣೆಯಿಲ್ಲದೆ ಪ್ರವೇಶಿಸಬಹುದಲ್ಲದೆ ಮನೆಯ ಯಜಮಾನನೂ ಅಪ್ಪಣೆಯಿಲ್ಲದೆ ಪ್ರವೇಶಿಸಬಾರದು. ಹೆಂಗಸರಿಗೆ ಆಯಾಸವಿಲ್ಲವೋ? ಆಗ ಅವರು ಅಲ್ಲಿ ಮನಸ್ಸಿಗೆ ಬಂದಂತೆ ಹೊರಳಾಡಬಹುದು. ಅವರಿಗೆ ಆಟ ಪಾಠಗಳಿಲ್ಲವೋ? ಜನಾನಾದೊಳಗೆ ಅವರು ಲಜ್ಜೆಯನ್ನು ಬಿಟ್ಟು ಸಂತೋಷವಾಗಿರಬಹುದು. "ಉಲ್ಲಾಸವೇ ಆಗಲಿ, ಆಯಾಸವೇ ಆಗಲಿ ಹೆಚ್ಚಾದ ಕಾಲದಲ್ಲಿ ಲಜ್ಜೆಯನ್ನಿಟ್ಟುಕೊಳ್ಳುವದು ಪ್ರಕೃತಿಗೆ ವಿರುದ್ಧವಾದದ್ದು." ಅಹೋರಾತ್ರಿ ಗಂಡಸರಿಗಾಗಿ ಮುದುರಿಕೊಂಡು ಮುಚ್ಚಿಕೊಂಡು ಕೂತುಕೊಳ್ಳಬೇಕೆಂದರೆ ಒಂದು ಆಜನ್ಮಶಿಕ್ಷೆಯೇ. ಸಾಮಾನ್ಯವಾಗಿ ಹಿಂದೂ ಜನರಲ್ಲಿ ಹೆಂಗಸರಿಗೆ ಪೂರ್ವಕಾಲದಲ್ಲಿದ್ದಂತೆ ಅಂತಃಪುರ ಇಲ್ಲವೇ ಇಲ್ಲ. ಪ್ರಕೃತಿ ಗುಣ ಸ್ಥಿತಿಗತಿಗಳಿಗನುಕೂಲವಾಗುವಂತೆ ಪ್ರಶಸ್ತವಾಗಿರಲಿಕ್ಕಾಗಿ ಜಾಗವೇ ಇಲ್ಲ. ದೇವರ ಮನೆಯಲ್ಲಿ ಏಕಾಂತವಿದೆ; ಆದರೆ ಅಲ್ಲಿ ಮಲಗಬಾರದು. ಮತ್ತೆ ಅಡಿಗೆಮನೆಯ ನೆಲವೇ ಗತಿ. ಯಾಕೆಂದರೆ ಹಾಸಿಗೆ, ಚಾಪೆ ಅಲ್ಲಿ ತಕ್ಕೊಂಡು ಹೋದರೆ ಮೈಲಿಗೆ. ಬೇರೆಕಡೆಯಲ್ಲಿ ಗಂಡಸರಿದ್ದಾರೆ. ಅವರಿದಿರಿನಲ್ಲಿ ಮಲಗುವುದು ಅಧರ್ಮ. ಅವರ ಒಳಗಾರರ ಮರ್ಯಾದೆಗೆ ಕಮ್ಮಿ. ಇಂಥ ಹಿಂಸೆಯು ಮುಸಲ್ಮಾನ ಸ್ತ್ರೀಯರಿಗೆ ಬಹಳ ಅಪರೂಪ. ಸ್ತ್ರೀಸ್ವಭಾವಕ್ಕನುಸಾರವಾಗಿ ಅವರು ತಮ್ಮ ಜನಾನಾದೊಳಗೆ ಬೇಕಾದಂತಿರಬಹುದು ಅಲ್ಲಿ ಹವೆ ಇಲ್ಲ ಸ್ವಚ್ಛತೆಯಿಲ್ಲ ಎಂಬುದು ತಿಳುವಳಿಕೆಯಿಲ್ಲದವರ ಮಾತು. ನಾನು ವೈದ್ಯನಾಗಿ ಎಷ್ಟೋ ಜನಾನಾಗಳನ್ನು ನೋಡಿದ್ದೇನೆ. ಮುಸಲ್ಮಾನರಲ್ಲಿ ಗಂಡಸರಲ್ಲಿಯೂ ಹೆಂಗಸರಲ್ಲಿಯೂ ಸ್ವಚ್ಛತೆಯೂ ಕಡಿಮೆಯೆಂಬುದು ನಿಜ. ಆದರೆ ಹೆಂಗಸರನ್ನು ಮಾತ್ರ ಗಾಳಿಯಿಲ್ಲದ ಜಾಗದಲ್ಲಿಡುತ್ತಾರೆ ಎಂಬ ಮಾತು ಸುಳ್ಳು. ಹಾಗೆಲ್ಲಿಯಾದರೂ ಇದ್ದರೆ ಮಧ್ಯಸ್ಥಿತಿಯವರ ಕೆಲವು ಮನೆಗಳಲ್ಲಿ ಮಾತ್ರ ಇದೆ. ಬಡವರಿಗೆ 'ಘೋಷಾ' 'ಜನಾನಾ' ಸಾಧಾರಣವಾಗಿ ಇಲ್ಲವೇ ಇಲ್ಲ. ದೊಡ್ಡವರಲ್ಲಿ ವಿಶಾಲವಾದ ಸುಖತರವಾದ ಜನಾನಾಗಳಿವೆ. ಮತ್ತು ಅಲ್ಲಿ ಅವರಿಗೆ ಬೇಕಾದಷ್ಟು ಸ್ವಾತಂತ್ರ್ಯವಿದೆ.

"ಅವರಲ್ಲಿ ಈಗಲೂ ಅನುಕೂಲತೆ ಇಲ್ಲದಿದ್ದರೆ ಮಾತ್ರ ಹುಡುಗಿಯರಿಗೆ ವಿದ್ಯೆ ಕಲಿಸುವುದಿಲ್ಲ. ಅಲ್ಲದೆ ಸಾಧಾರವಾಗಿ ಮಧ್ಯಮ ಉಚ್ಚ ತರಗತಿಯ ಎಲ್ಲ ಹುಡುಗಿಯರಿಗೂ ಓದು ಬರಹಗಳನ್ನು ಧರ್ಮವೆಂದರಿತು ಕಲಿಸಿಯೇ ತೀರುತ್ತಾರೆ." ಹಿಂದೂ ಜನರಲ್ಲಿ ಹುಡುಗಿಯು ಹುಟ್ಟುವದು ವಿವಾಹಕ್ಕಾಗಿಯೇ: ಹುಡುಗನ

ಗುಲಾಮಗಿರಿ ಒಂದನ್ನು ಮಾಡುವುದಕ್ಕಾಗಿಯೇ. ದೊಡ್ಡ ದೊಡ್ಡ ಪಂಡಿತರ ಮನೆಯ ಹೆಂಗಸರೂ ನಿರಕ್ಷರಕುಕ್ಷಿಗಳೇ. ಅಡಿಗೇಮನೆಯ, ದೇವರಮನೆಯ ಸಾಂಪ್ರದಾಯಗಳನ್ನು ಗಂಡಸರಿಗೆ ತೊಂದರೆ ಇಲ್ಲದಂತೆ ನಡೆಸುವವಮಟ್ಟಿಗೆ ಯೋಗ್ಯತೆ ಇದ್ದರೆ ಸಾಕು. ಆ ಹೆಂಗಸು ಉತ್ತಮ ತರಗತಿಗೆ ಸೇರಿಬಿಡುತ್ತಾಳೆ. ಸ್ವಾನುಕೂಲ್ಯ ದೇವತೆಯ ಉಪಾಸಕರಾದ ಗಂಡಸರ ಆಶೀರ್ವಾದದಿಂದ ಇನ್ನೇನು ಕಡಿಮೆ? ಗಂಡನಿಗೆ ಸುಖ, ಹೆಂಡತಿಗೆ ಸಂತೋಷ. ಧರ್ಮ ಮುಗಿಯಿತು.

"ನಸ್ತ್ರೀಣಾಂಸ್ವಾತಂತ್ರ್ಯ ಮರ್ಹತಿ". ಹೆಂಗಸರು ಸ್ವಾತಂತ್ರ್ಯಕ್ಕೆ ಅರ್ಹರಲ್ಲ ಎಂಬ ಮುಖ್ಯ ನಿರ್ಧಾರವು ಮನುಧರ್ಮಶಾಸ್ತ್ರದೊಳಗೆ ಯಾರೋ ತೋರಿಸುವುದಕ್ಕೆ ಮೊದಲು ಹಿಂದೂ ಸ್ತ್ರೀಯರೂ, ಉತ್ತಮ ಮೇಧಾವಿಗಳೂ ಧಾರ್ಮಿಕರೂ ತೇಜಸ್ವಿಗಳೂ ಆಗಿದ್ದರು. ಈ ನೀಚ ವಿಚಾರವು ಬಂದಂದಿನಿಂದ ಅವರು ಕೇವಲ ಶಿಶೂತ್ಪಾದಕ ಯಂತ್ರಗಳಾಗಿ ಇಡಲ್ಪಟ್ಟಿದ್ದಾರೆಂದರೆ ಅತಿಶಯೋಕ್ತಿಯಾಗಲಾರದು.

"ತುರ್ಕರು" ಮೂರ್ಖರು. "ಮಹಾಮಡನ್" 'ಮಹಾಮೂಢನ್', 'ಮಹಾಮಡೆಯನ್' ಎಂದು ಅವರನ್ನು ನಿಂದಿಸುವದು ಅವಿವೇಕ. ಮುಸಲ್ಮಾನವರಲ್ಲಿ ಇರುವ ಕೆಲವು ಅಜ್ಞಾನಗಳನ್ನು ಮಾತ್ರ ಕಂಡು ಅವಿವೇಕಿಗಳಂತೆ ಅವರ ಧರ್ಮ ಸಂಪ್ರದಾಯಗಳನ್ನು ಕುರಿತು ನಿರ್ಧರಿಸುವುದು ಮೂರ್ಖತನ. ನಾನಾ ಮತಗಳಿಗೆ ಸೇರಿದ "ಸಮಾನ ತರಗತಿಯ ಪುರುಷ, ಸ್ತ್ರಿಯರನ್ನು ಮಾತ್ರ ಸರಿಹೋಲಿಸಿ ನೋಡಬೇಕು. ಆಗ ಮಾತ್ರ ನೈಜವು ತಿಳಿದುಬರುವುದು". ಮತ ಮತಗಳಲ್ಲಿರುವ ಪರಸ್ಪರ ಕ್ಲೇಶಗಳಿಗೆ "ಅಜ್ಞಾನವೇ ಮುಖ್ಯ ಕಾರಣವಲ್ಲದೆ ಅನರ್ಹತೆ ಅಲ್ಲ." ಪರಸ್ಪರ ಪರಿಚಯುವನ್ನು ಮಾಡಿಕೊಂಡು ಒಬ್ಬರನ್ನೊಬ್ಬರು ಚೆನ್ನಾಗಿ ತಿಳಿದುಕೊಳ್ಳುವವರೆಗೆ ಕೂಪಮಂಡೂಕನ್ಯಾಯ"ವೇ ಪ್ರಬಲವಾಗಿದ್ದು ಎಲ್ಲರಿಗೂ ದುರ್ಭಿಕ್ಷ, ದುರ್ಗತಿ, ಭಯ, ಸಂಶಯಗಳೇ ಲಭಿಸುವವಲ್ಲದೆ ಸುಖವು ಸುತರಾಂ ಉಂಟಾಗಲಿಕ್ಕಿಲ್ಲ. ಸ್ವರಾಜ್ಯವು ಹಾಗಿರಲಿ; ಸಾಮಾನ್ಯವಾದ ಸದ್ಗುಣಗಳೂ ಸಹ ಬರಲಿಕ್ಕಿಲ್ಲ. ಪ್ರತಿಯೊಂದು ಸಂಸ್ಕೃತಿಯಲ್ಲಿಯೂ ಒಂದು ಸೌಂದರ್ಯವಿದೆ, ಬಲವಿದೆ. ಅದನ್ನು ತಿಳಿದುಕೊಳ್ಳುವದರಿಂದ ತಮ್ಮ ಬುದ್ಧಿಯೂ ಪ್ರಫುಲ್ಲವಾಗುತ್ತದೆ. ಸಹಿಷ್ಣುತೆಯು ಹೆಚ್ಚಿ, ಪ್ರೇಮವು ಬೆಳೆದು ಸಮಾಜಕ್ಕೂ ಸುಖವಾಗುತ್ತದೆ.

# ನಾಟ್ಯಸಂಘದ ವಿಶೇಷ ಕಾರ್ಯಕ್ರಮ

ನವೆಂಬರ್ 2 ರಿಂದ 11ರ ವರೆವಿಗೆ

## ಅಖಿಲಭಾರತ ಕನ್ನಡ ನಾಟಕ ಸ್ಪರ್ಧೆ

ಇದೇ ಸಂದರ್ಭದಲ್ಲಿ 1847 ರಿಂದ ಇಂದಿನವರೆವಿಗೆ ಪ್ರಕಟವಾದ ನಾಟಕಗಳ ಸಮಗ್ರಸೂಚಿ ಹಾಗೂ ಮುನ್ನೂರು ನಾಟಕಗಳ ವಿವರಣಾತ್ಮಕ ಲೇಖನವನ್ನೊಳಗೊಂಡ **'ರಂಗ ಸೌರಭ'** ಎಂಬ ಪುಸ್ತಕ ಬರುವುದು. ಹಾಗೆಯೇ ಕನ್ನಡ ರಂಗಭೂಮಿ ಮತ್ತು ಅದರ ಸಮಸ್ಯೆಗಳನ್ನು ಕುರಿತ **'ನೇಪಥ್ಯ'** ಎಂಬ ಸಾಂದರ್ಭಿಕ ಪ್ರಕಟಣೆಯನ್ನು ತರಲಾಗುವುದು. ಇದರ ಜೊತೆಗೆ ಕನ್ನಡನಾಡಿನ ನಾನಾ ಊರುಗಳಲ್ಲಿರುವ ರಂಗಮಂದಿರಗಳ - ಅಲ್ಲಿ ಲಭ್ಯವಿರುವ ಸೌಲಭ್ಯಗಳ ಬಗ್ಗೆ ಮಾಹಿತಿನೀಡುವ **'ರಂಗಶ್ರೀ'** ಎಂಬ ಉಪಯುಕ್ತವಾದ ಕೈ ಪಿಡಿಯನ್ನು ತರಲಾಗುವುದು.

---

ಶೀಘ್ರದಲ್ಲೇ ಕರ್ನಾಟಕದಾದ್ಯಂತ ತೆರೆಗೆ

"ದೇವಿಪ್ರಸಾದ್ ಪ್ರೊಡಕ್ಷನ್ಸ್" ಬೆಂಗಳೂರು ಇವರ ಮೊದಲ ಕಾಣಿಕೆ

ಯಶವಂತ ಚಿತ್ತಾಲರ ಬಹುಮುಖ್ಯ ಕಾದಂಬರಿ

## "ಮೂರು ದಾರಿಗಳು"

**ಗಿರೀಶ್ ಕಾಸರವಳ್ಳಿಯವರ ನಿರ್ದೇಶನದಲ್ಲಿ ಹೊರಗೆ ಬರುತ್ತಿದೆ.**

ಸಂಭಾಷಣೆ : **ಜಿ. ಎಸ್. ಸದಾಶಿವ**

ಸಂಗೀತ : **ಬಿ. ವಿ. ಕಾರಂತ**

ಛಾಯಾಗ್ರಹಣ : **ಎಸ್. ಆರ್. ಭಟ್**

ನಿರ್ಮಾಪಕರು : **ದೇವಿಪ್ರಸಾದ್**

ನಿರ್ವಾಹಕ ನಿರ್ಮಾಪಕರು

**ಯಂ. ಬಿ. ಜಯರಾಂ**

665-11ನೇ ಬಿ ಮೈನ್, ಜಯನಗರ, ಬೆಂಗಳೂರು-560041.

